




# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*

Vol. - 13 | December 2015 | Issue No. 07 | ₹ 10/-








**His Excellency Sri Pranab Mukherjee, President of India Presented Rashtrapathi Awards to Scout, Guide, Rover & Ranger of Karnataka on 8th December 2015 at Rashtrapathi Bhavan, New Delhi**



**28.11.2015** ರಂದು ದೆಹಲಿ ಕರ್ನಾಟಕ ಸಂಘದ ಸಭಾಂಗಣದಲ್ಲಿ ಜರುಗಿದ ಕೊಂಡಜ್ಜಿ ಬಸಪ್ಪ ಜನ್ಮಶತಮಾನೋತ್ಸವ ಆಚರಣೆ ಸಮಾರಂಭವನ್ನು ಶ್ರೀ ಜಿ.ಎಮ್. ಸಿದ್ದೇಶ್ವರ್, ಮಾನ್ಯ ಬೃಹತ್ ಕೈಗಾರಿಗೆ ಹಾಗೂ ಸಾರ್ವಜನಿಕ ಉದ್ಯಮಿಗಳ ರಾಜ್ಯ ಸಚಿವರು, ಭಾರತ ಸರ್ಕಾರ, ನ್ಯಾಯಮೂರ್ತಿ ಶ್ರೀ ವಿ. ಗೋಪಾಲಗೌಡ, ಉಚ್ಛನ್ಯಾಯಲಯದ ಮಾನ್ಯ ನ್ಯಾಯಾದೀಶರು ಮತ್ತು ಶ್ರೀ ಮಲ್ಲಿಕಾರ್ಜುನ ಖರ್ಗೆ, ಲೋಕಸಭೆಯ ಕಾಂಗ್ರೆಸ್ ಪಕ್ಷದ ಮಾನ್ಯ ನಾಯಕರು ಉದ್ಘಾಟಿಸಿದರು. ಮುಖ್ಯ ರಾಷ್ಟ್ರೀಯ ಆಯುಕ್ತರಾದ ಶ್ರೀ ಬಿ. ಐ. ನಾಗರಾಳೆ, ಶ್ರೀ ಪಿ.ಜಿ.ಆರ್. ಸಿಂಧ್ಯ ರಾಜ್ಯ ಮುಖ್ಯ ಆಯುಕ್ತರು, ಶ್ರೀ ಎಂ. ಎ. ಖಾಲಿದ್, ರಾಜ್ಯ ಆಯುಕ್ತರು (ಸ್ಕೌ), ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು (ಗೈ) ಅವರುಗಳು ಚಿತ್ರದಲ್ಲಿದ್ದಾರೆ.

## His Excellency Sri Pranab Mukherjee, President of India Presented National Awards on 8th December 2015 at Rashtrapathi Bhawan, New Delhi



**Sri P.G.R Sindhia**
S.C.C. BS&G Karnataka
Silver Elephant



**Smt. Shantha V. Acharya**
Vice-President, Karnataka
Silver Elephant



**Sri K. Thimmaiah**
D.C.C., Raichur
Silver Elephant



**Smt. P. Saroja**
D.C.C., Bengaluru North
Bar to Silver Star



**Sri K. Narasimha Murthy**
Group Leader
Sri Chamundi Scout Group, B'luru
Silver Star



**Sri P. Vishwanath**
D.C.C., Mysuru
Silver Star



His Excellency Sri Mohammed Ansari, Vice-President of India being greeted by Smt Dr. V. Vijayalakshmi, National Commissioner (Guides) on the occasion of Foundation day. Sri K. Sukumara, Director of NHQ is seen.



His Excellency Sri Vaju Bhai Rudha Bai Vala, Governor of Karnataka & Patron, Bharat Scouts & Guides Karnataka released Flag Stickers on the Occasion of Foundation Day at RajBhavan, Bengaluru, Sri Kondajji B. Shanmukhappa, Vice-President, Smt. Geetha Nataraj, SC(G), Sri C.S. Reddy, JSS(S) & other State officials are seen.



Smt Smrithi Zubin Irani being Greeted by Sri B.I Nagarale, IAS (Rtd) Chief National Commissioner, Bharat Scouts & Guides and other National Headquarters Officials on the occasion of Foundation Day.




ದಿನಾಂಕ: 20.11.2015 ರಂದು ಕುಣಿಗಲ್ ತಾಲ್ಲೂಕಿನ ಕಂಚುಗಲ್ ಬಂಡೆಮಠ ಸಿದ್ಧಗಂಗ ಪ್ರೌಢಶಾಲೆ ಆವರಣದಲ್ಲಿ ರಾಮನಗರ ಜಿಲ್ಲೆಯ ಸ್ಕೌಟ್ ಶಿಕ್ಷಕರ, ಗೈಡ್ ಶಿಕ್ಷಕಿಯರ ಸಮಾವೇಶವನ್ನು ಶ್ರೀ ಎನ್. ಶ್ರೀನಿವಾಸನ್ ರಾಜ್ಯ ಸ್ಥಾನಿಕ ಆಯುಕ್ತರು (ಪ್ರಕಟಣೆಗಳು ಮತ್ತು ತರಬೇತಿ) ಶ್ರೀ ರಂಗಸ್ವಾಮಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಉದ್ಘಾಟಿಸುತ್ತಿರುವುದು ಶ್ರೀಮತಿ ಬಿ.ವಿ.ರಾಮಲತ, ಸಹಾಯಕ ರಾಜ್ಯ ಆಯುಕ್ತರು (ಗೈಡ್ಸ್) ಹಾಗೂ ಇತರರರನ್ನು ಕಾಣಬಹುದು.





ದಿನಾಂಕ :–04.12.2015 ರಂದು ರಾಜ್ಯ ಕೇಂದ್ರ ಕಛೇರಿ ಶಾಂತಿಗೃಹದಲ್ಲಿ ರಾಜ್ಯದ ವಿವಿಧ ಜಿಲ್ಲೆಗಳ ಆಯುಕ್ತರುಗಳು ಹಾಗೂ ಕಾರ್ಯದರ್ಶಿಗಳ ಸಮಾವೇಶ ನಡೆಯಿತು. ಶ್ರೀ ಪಿ.ಜಿ.ಆರ್ ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಈ ಸಮಾವೇಶದಲ್ಲಿ ರಾಜ್ಯಪದಾಧಿಕಾರಿಗಳು ಮತ್ತು ವಿವಿಧ ಜಿಲ್ಲೆಗಳ ಆಯುಕ್ತರುಗಳು ಮತ್ತು ಕಾರ್ಯದರ್ಶಿಗಳನ್ನು ಚಿತ್ರದಲ್ಲಿ ಕಾಣಬಹುದು.





ದಿನಾಂಕ:–05.12.2015 ರಂದು ಶ್ರೀ ಪಿ.ಜಿ.ಆರ್ ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರ ಅಧ್ಯಕ್ಷತೆಯಲ್ಲಿ ರಾಜ್ಯ ಕೇಂದ್ರ ಕಛೇರಿಯಲ್ಲಿ ನಡೆದ ಯೋಜನಾ ಸಮಿತಿ ಸಭೆಯಲ್ಲಿ ಭಾಗವಹಿಸಿದ ರಾಜ್ಯ ಪದಾಧಿಕಾರಿಗಳು ಹಾಗೂ ಸದಸ್ಯರನ್ನು ಚಿತ್ರದಲ್ಲಿ ಕಾಣಬಹುದು.



ದಿನಾಂಕ: 07.11.2015 ರಂದು ಶಿವಮೊಗ್ಗ ಜಿಲ್ಲೆಯ ಜಿಲ್ಲಾಧಿಕಾರಿಗಳಾದ ಶ್ರೀ ವಿ.ಪಿ. ಇಕ್ಕೇರಿ ಅವರು ಸ್ಥಾಪನಾ ದಿನಾಚರಣೆ ಅಂಗವಾಗಿ ಧ್ವಜಚೀಟಿಗಳನ್ನು ಬಿಡುಗಡೆ ಮಾಡುತ್ತಿರುವುದು, ಜಿಲ್ಲಾಪದಾಧಿಕಾರಿಗಳನ್ನು ಹಾಗೂ ಸ್ಕೌಟ್ಸ್-ಗೈಡ್ಸ್‌ಗಳನ್ನು ಚಿತ್ರದಲ್ಲಿ ಕಾಣಬಹುದು.



ದಿನಾಂಕ: 07.11.2015 ರಂದು ಯಾದಗಿರಿ ಜಿಲ್ಲೆಯ ಜಿಲ್ಲಾಧಿಕಾರಿಗಳಾದ ಶ್ರೀ ಮನೋಜ್ ಜೈನ್, ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿಗಳಾದ ಶ್ರೀ ವಿನಾಯಕ ಪಾಟೀಲ್, ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳಾದ ಶ್ರೀ ವಿಕಾಸ್ ಕಿಶೋರ್ ಸುರಾಳ್‌ಕರ್ ಅವರುಗಳು ಧ್ವಜಚೀಟಿಗಳನ್ನು ಬಿಡುಗಡೆ ಮಾಡುತ್ತಿರುವುದು.




ದಿನಾಂಕ: 12.12.2015 ರಂದು ಚಿತ್ರದುರ್ಗದ ಸ್ಕೌಟ್-ಗೈಡ್ ಭವನದಲ್ಲಿ ಏರ್ಪಡಿಸಲಾಗಿದ್ದ ಉಚಿತ ನೇತ್ರ ತಪಾಸಣಾ ಶಿಬಿರದಲ್ಲಿ ಡಾ. ಕೆ. ನಾಗರಾಜ್ ಅವರು ಕಣ್ಣಿನ ಪರೀಕ್ಷೆ ಮಾಡುತ್ತಿರುವುದು. ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



ದಿನಾಂಕ:-25.11.2015 ರಂದು ಕೊಪ್ಪಳ ಸ್ಥಳೀಯ ಸಂಸ್ಥೆ ಆಶ್ರಯದಲ್ಲಿ ನಡೆದ ಸ್ಕೌಟ್ ಶಿಕ್ಷಕ-ಗೈಡ್ ಶಿಕ್ಷಕಿಯರ ಸಮಾವೇಶವನ್ನು ಜಿಲ್ಲಾ ಪಂಚಾಯತ್ ಯೋಜನಾ ನಿರ್ಧೇಶಕರಾದ ಶ್ರೀ ರವಿ ಬಿಸರಳ್ಳಿ ಹಾಗೂ ಜಿಲ್ಲಾ ಪದಾಧಿಕಾರಿಗಳು ಉದ್ಘಾಟಿಸುತ್ತಿರುವುದು.



ದಿನಾಂಕ 01 ರಿಂದ 7 ಡಿಸೆಂಬರ್ 2015ರ ವರೆಗೆ ಬೆಂಗಳೂರು ದಕ್ಷಿಣ ಜಿಲ್ಲೆಯ ಆನೇಕಲ್ ಸ್ಥಳೀಯ ಸಂಸ್ಥೆ ಆಶ್ರಯದಲ್ಲಿ ನಡೆದ ಮೂಲ ತರಬೇತಿ ಶಿಬಿರದ ಸಮಾರೋಪ ಸಮಾರಂಭದಲ್ಲಿ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಮಾತನಾಡುತ್ತಿರುವುದು. ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರ ಕುಮಾರ್ ಹಾಗೂ ಇತರೆ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



ಆನೇಕಲ್ ಸ್ಥಳೀಯ ಸಂಸ್ಥೆ ಏರ್ಪಡಿಸಿದ ಮೂಲ ತರಬೇತಿ ಶಿಬಿರದಲ್ಲಿ ಶಿಬಿರಾರ್ಥಿಗಳು ಪ್ರಥಮ ಚಿಕಿತ್ಸೆ ಪ್ರಯೋಗಿಕ ಕಾರ್ಯದಲ್ಲಿ ತೊಡಗಿರುವುದು.

# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*


Monthly Published by

**The Bharat Scouts & Guides, Karnataka**

State Headquarters, Shanthigruha

# 39, Palace Road, Bengaluru-560 001

Tel : 080-2226 0017, 2226 7470




**ಪರಿವಿಡಿ**




**ಸಂಚಿಕೆಯ ವಾರ್ಷಿಕ ಚಂದಾ ರೂ. 100/-**

**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ ವಾರ್ಷಿಕ ಚಂದಾ ರೂ. 100/-** ಚಂದಾಹಣವನ್ನು

ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ

ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ # 39, ಅರಮನೆ ರಸ್ತೆ, ಬೆಂಗಳೂರು-560 001

ದೂ: 080-2226 0017, 2226 7470 ಇಲ್ಲಿಗೆ ಕಳುಹಿಸಲು ಕೋರಿದೆ.

ನಮ್ಮ ಸಂಸ್ಥೆಯ ವೆಬ್‌ಸೈಟ್ ಹಾಗು ಫೇಸ್‌ಬುಕ್ ಚಾಲನೆಯಲ್ಲಿದೆ : ಸಂಪರ್ಕಿಸಿ

**www.bsgkarnataka.org | www.kondajjibasappa.org | www.kondajjibasappa.com**

**Face book ground Link: BSGKJamborette2015**

# ರಾಜ್ಯ ಮುಖ್ಯ ಆಯುಕ್ತರ ನುಡಿ



ಪ್ರಿಯ ಓದುಗ ಮಿತ್ರರೆ,

**2016ರ ಹೊಸ್ತಿನಲ್ಲಿದ್ದೇವೆ. ಜಗತ್ತಿಗೆ ಶಾಂತಿ, ಅಹಿಂಸೆ ಮತ್ತು ಕರುಣೆಯ ಸಂದೇಶ ನೀಡಿದ ಏಸುಕ್ರಿಸ್ತರ ಜನ್ಮದಿನ, ಕ್ರಿಸ್ಮಸ್ ಹಬ್ಬದ ಆಚರಣೆ ಈ ತಿಂಗಳಲ್ಲಿ ಪ್ರಪಂಚದೆಲ್ಲೆಡೆ ಅದ್ದೂರಿಯಿಂದ ಆಚರಿಸಲ್ಪಟ್ಟಿದೆ. ಜೊತೆಗೆ ಜನವರಿಯ ಆರಂಭದಲ್ಲಿ ನವಚೈತನ್ಯವನ್ನು ತುಂಬುವ ಸುಗ್ಗಿಯ ಹಬ್ಬ "ಸಂಕ್ರಾತಿ"ಯೂ ಬರಲಿದೆ. ಜಗತ್ತಿನ ಎಲ್ಲೆಡೆ ಶಾಂತಿ, ಸೌಹಾರ್ದ, ಅಹಿಂಸೆ ಮತ್ತು ನೆಮ್ಮದಿ ತುಂಬಿರಲಿ ಮತ್ತು ಎಲ್ಲರಿಗೂ ಹೊಸ ವರುಷ, ಕ್ರಿಸ್ಮಸ್ ಮತ್ತು ಸಂಕ್ರಾತಿ ಹಬ್ಬಗಳು ಸಮೃದ್ಧಿಯುಂಟುಮಾಡಲಿ ಎಂದು ಆಶಿಸುತ್ತೇನೆ.**

2015ನೇ ವರ್ಷದಲ್ಲಿ ಆಯೋಜಿಸಿದ ಕಾರ್ಯಕ್ರಮ-ತರಬೇತಿಗಳ ಸಮೀಕ್ಷೆಯನ್ನು ಮಾಡಿ, 2016ರಲ್ಲಿ ನಡೆಸಬೇಕಾದ ಕಾರ್ಯಕ್ರಮಗಳನ್ನು, ತರಬೇತಿಗಳನ್ನು ಯೋಚಿಸಿ, ಯೋಜಿಸಲು ಇದು ಸಕಾಲ. ಈ ವರ್ಷದಲ್ಲಿ ಕರ್ನಾಟಕದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯು ಸಶಕ್ತವಾಗಿ ರಾಜ್ಯದೆಲ್ಲೆಡೆ ವಿಸ್ತರಿಸುವ ಪ್ರಯತ್ನ ಯಶಸ್ವಿಯಾಗಿದೆ. ನಮ್ಮ ಒಟ್ಟು ಸಂಖ್ಯೆ3.5 ಲಕ್ಷವನ್ನು ದಾಟಿದೆ. ಎಲ್ಲ ಜಿಲ್ಲೆಗಳಲ್ಲಿ ಹಾಗು ಸ್ಥಳೀಯ ಸಂಸ್ಥೆಗಳಲ್ಲಿ ಸಂಘಟನೆಯು ಕ್ರಿಯಾಶೀಲವಾಗಿದ್ದು ಮೂಲ ತರಬೇತಿಗಳನ್ನು ಹಾಗು ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದೆ.

ಈ ಅಕ್ಟೋಬರ್/ನವೆಂಬರ್/ಡಿಸೆಂಬರ್‌ನಲ್ಲಿ ಹಲವಾರು ಕಾರ್ಯಕ್ರಮಗಳು ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಜರುಗಿವೆ. ರಾಜ್ಯದಾದ್ಯಂತ, ಸ್ಕೌಟ್ಸ್-ಗೈಡ್ಸ್ ಚಳವಳಿಗೆ ಗಣನೀಯ ಸೇವೆಸಲ್ಲಿಸಿದ ಶ್ರೀ ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವ ಎಲ್ಲ ಜಿಲ್ಲೆಗಳಲ್ಲಿ ಯಶಸ್ವಿಯಾಗಿ ಆಚರಿಸಲಾಗಿದೆ. ರಾಜ್ಯ ಪ್ರಧಾನ ಕಛೇರಿಯಲ್ಲಿ ಡಿಸೆಂಬರ್ 11 ರಂದು ಶ್ರೀ ಕೊಂಡಜ್ಜಿ ಬಸಪ್ಪ ಅವರ ಬಗ್ಗೆ ಹಲವಾರು ಹಿರಿಯರು ಮಾತನಾಡಿ,ಅವರ ಭಾವಚಿತ್ರಕ್ಕೆ ಪುಷ್ಪನಮನ ಮಾಡಿ ಸರ್ವಧರ್ಮ ಪ್ರಾರ್ಥನೆ ಜರುಗಿತು. 28.11.2015 ರಂದು ದೆಹಲಿಯ ಕರ್ನಾಟಕ ಸಂಘದ ಸಭಾಂಗಣದಲ್ಲಿ ನಡೆದ ಜನ್ಮಶತಾಬ್ದಿ ಸಮಾರಂಭವು ರಾಷ್ಟ್ರದ ಗಮನ ಸೆಳೆಯಿತು. ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಸುಪ್ರೀಂಕೋರ್ಟ್ ನ್ಯಾಯಮೂರ್ತಿ ಶ್ರೀ.ವಿ.ಗೋಪಾಲ ಗೌಡರು, ಕೇಂದ್ರ ಸಚಿವರಾದ ಶ್ರೀ ಜಿ.ಎಂ.ಸಿದ್ದೇಶ್ವರ, ಲೋಕಸಭೆಯಲ್ಲಿ ಕಾಂಗ್ರೆಸ್ ಪಕ್ಷದ ನಾಯಕರಾಗಿರುವ ಶ್ರೀ ಮಲ್ಲಿಕಾರ್ಜುನ ಖರ್ಗೆ ಮತ್ತು ಚಳವಳಿಯ ರಾಷ್ಟ್ರೀಯ ಮುಖ್ಯ ಆಯುಕ್ತರಾದ ಶ್ರೀ ಬಿ.ಐ.ನಾಗರಾಳೆಯವರು ಭಾಗವಹಿಸಿ ಯಶಸ್ವಿಗೊಳಿಸಿದರು, "ಸ್ವಂತಕ್ಕಾಗಿ" ಏನನ್ನೂ ಬಯಸದೆ ಸಮಾಜದ ಒಳಿತಿಗಾಗಿ ಶ್ರಮಿಸಿದ ಶ್ರೀ ಕೊಂಡಜ್ಜಿ ಬಸಪ್ಪನವರು ಇಂದಿನ ಯುವಕರಿಗೆ ಆದರ್ಶ ಎಂದ ನ್ಯಾಯಮೂರ್ತಿ ಶ್ರೀ ವಿ.ಗೋಪಾಲಗೌಡರು 'ಸ್ಕೌಟ್ಸ್ ಮತ್ತು ಗೈಡ್ಸ್' ಚಳವಳಿಯು ರಾಷ್ಟ್ರದ ಎಲ್ಲಾ ಶಾಲಾ ಕಾಲೇಜುಗಳಲ್ಲಿ ಬೆಳೆಯಬೇಕು ಮತ್ತು ತನ್ಮೂಲಕ ಶಿಸ್ತು ಮತ್ತು ರಾಷ್ಟ್ರದ ಐಕ್ಯತೆಯನ್ನು ಕಾಪಾಡಿಕೊಂಡು ಬರಲು ಸಾಧ್ಯವಾಗುತ್ತದೆ ಎಂದರು.

ಶ್ರೀ ಕೊಂಡಜ್ಜಿ ಬಸಪ್ಪನವರ ಬಗ್ಗೆ ರಾಜ್ಯ ಸಂಸ್ಥೆ ಇಂಗ್ಲೀಷ್‌ನಲ್ಲಿ ಪ್ರಕಟಿಸಿದ ಮಸ್ತಕ ಬಿಡುಗಡೆ ಮಾಡಿದ ಶ್ರೀ ಮಲ್ಲಿಕಾರ್ಜುನ ಖರ್ಗೆ ಅವರು 1976 ರಲ್ಲಿ ಶ್ರೀ ಕೊಂಡಜ್ಜಿ ಬಸಪ್ಪನವರು ತಮ್ಮನ್ನು ಸ್ಕೌಟ್ಸ್ ಮತ್ತು ಗೈಡ್ಸ್ ಕಛೇರಿಗೆ ಕರೆದುಕೊಂಡು ಹೋಗಿ ಸನ್ಮಾನಿಸಿದ್ದನ್ನು ಹಾಗು ಅವರು ಸ್ಕೌಟ್ ಸಮವಸ್ತ್ರದಲ್ಲಿ ತಮ್ಮ ಕಛೇರಿಗೆ ಬಂದಿದ್ದನ್ನು ನೆನಪಿಸಿ ಕೊಂಡು, ಅವರ ನಿಸ್ವಾರ್ಥ ಸೇವೆ ನಮಗೆಲ್ಲಾ ಮಾದರಿ ಎಂದರು.

ಇದೇ ಸಂದರ್ಭದಲ್ಲಿ ದೆಹಲಿಯಲ್ಲಿ, ಸಂಸ್ಥೆಯ ರಾಷ್ಟ್ರೀಯ ಪರಿಷತ್ತು ಸಮಾವೇಶಗೊಂಡಿತ್ತು. ಹಲವಾರು ವಿಷಯಗಳನ್ನು ಚರ್ಚಿಸಿದ ಪರಿಷತ್ತು, 2016ರಲ್ಲಿ ರಾಷ್ಟ್ರೀಯ ಜಾಂಬೂರಿಯನ್ನು ಮೈಸೂರಿನಲ್ಲಿ ನಡೆಸಲು ತೀರ್ಮಾನಿಸಿದೆ, ಕರ್ನಾಟಕ ಸಂಸ್ಥೆಯ ಪರವಾಗಿ ಎಲ್ಲರನ್ನು ನಾನು ಮೈಸೂರಿನ ಜಾಂಬೂರಿಗೆ ಆಹ್ವಾನಿಸಿದ್ದೇನೆ.

ಮುಂದಿನ ವರ್ಷ ಮೈಸೂರಿನಲ್ಲಿ ಆಯೋಜಿಸಬೇಕಾದ ರಾಷ್ಟ್ರೀಯ ಜಾಂಬೂರಿಯು ನಮಗೆ ಅವಕಾಶವನ್ನು ಹಾಗು ಸವಾಲನ್ನು ಒಟ್ಟಿಗೆ ನೀಡಿದೆ. ಹಿಂದಿನ ಜಾಂಬೂರಿಗಳ ಮಾದರಿಯಲ್ಲಿ, ಅದಕ್ಕಿಂತ ಹೆಚ್ಚು ವ್ಯವಸ್ಥಿತವಾಗಿ, ಯೋಜಿತವಾಗಿ ಜಾಂಬೂರಿಯನ್ನು ನಾವುಗಳು ಯಶಸ್ವಿಯಾಗಿ ಸಂಘಟಿಸಬೇಕು. ಇದಕ್ಕೆ ಧೃಡ ಮನೋಬಲ, ಸಂಘಟನಾ ಸಾಮರ್ಥ್ಯ, ಯೋಜನೆ ಮತ್ತು ಅಪಾರ ಜನ ಸಹಾಯ ಬೇಕಾಗುತ್ತದೆ. ಕರ್ನಾಟಕದ ಎಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಹಾಗು ವಿವಿದ ಹಂತದ ಕಾರ್ಯಕರ್ತರು ಹೆಮ್ಮೆಯ ಈ ಕೆಲಸವನ್ನು ಪ್ರೀತಿಯಿಂದ, ದಕ್ಷತೆಯಿಂದ ಕ್ರಿಯಾಶೀಲವಾಗಿ ಒಳಗೊಂಡು ಮಾಡಬೇಕಿದೆ. ಬರುವ ಎಲ್ಲಾ ಅತಿಥಿಗಳನ್ನು ಪ್ರೀತಿಯಿಂದ ಸ್ವಾಗತಿಸಿ, ನೋಡಿಕೊಳ್ಳಬೇಕು. ನಾನು ವೈಯಕ್ತಿಕವಾಗಿ ರಾಷ್ಟ್ರೀಯ ಜಾಂಬೂರಿಯ ಯಶಸ್ವಿಗೆ ನಿಮ್ಮೆಲ್ಲರ ಹೃತ್ಪೂರ್ವಕ ಸಹಕಾರವನ್ನು ಕೋರುತ್ತೇನೆ.

ದಿನಾಂಕ: 04.12.2015 ರಂದು ರಾಜ್ಯ ಮಟ್ಟದ ಜಿಲ್ಲಾ ಕಾರ್ಯದರ್ಶಿಗಳ ಮತ್ತು ಆಯುಕ್ತರುಗಳ ಸಮಾವೇಶ ಬೆಂಗಳೂರಿನಲ್ಲಿ ಜರುಗಿತು. ಚಳವಳಿಯ ಬೆಳವಣಿಗೆಗೆ ಅಗತ್ಯವಾದ ತರಬೇತಿಗಳು ಹಾಗು ರಾಜ್ಯದ ಜಿಲ್ಲಾ ಸಂಸ್ಥೆಗಳು ಆಯೋಜಿಸಿರುವ ಕಾರ್ಯಕ್ರಮಗಳ ಬಗ್ಗೆ ಹಾಗು ಆಗಿರುವ ಗಣತಿಯ ಬಗ್ಗೆ ಚರ್ಚಿಸಲಾಯಿತು.

ದಿನಾಂಕ: 05.12.2015 ರಂದು ಜರುಗಿದ ಯೋಜನಾ ಸಮಿತಿಯ ಸಭೆಯಲ್ಲಿ 2016-17 ಸಾಲಿನ ವಾರ್ಷಿಕ ಯೋಜನೆಗಳು, ತರಬೇತಿ ಶಿಬಿರಗಳು, ಗಣತಿ ಬಗ್ಗೆ ಚರ್ಚಿಸಲಾಯಿತು.

ದಿನಾಂಕ: 08.12.2015 ರಂದು ದೆಹಲಿಯಲ್ಲಿ ರಾಷ್ಟ್ರಪತಿ ಭವನದಲ್ಲಿ ಗೌರವಾನ್ವಿತ ರಾಷ್ಟ್ರಪತಿಗಳು ಸ್ಕೌಟ್ ಮತ್ತು ಗೈಡ್ ಚಳವಳಿಗೆ ಗಣನೀಯ ಸೇವೆಸಲ್ಲಿಸಿದವರಿಗೆ ರಾಷ್ಟ್ರೀಯ ಪ್ರಶಸ್ತಿಗಳನ್ನು ನೀಡಿ ಗೌರವಿಸಿದ್ದಾರೆ. ಕರ್ನಾಟಕದ ಹತ್ತು ಸ್ಕೌಟ್ಸ್ ಮತ್ತು ಗೈಡ್ಸ್ ಹಾಗು ರೋವರ್ಸ್-ರೇಂಜರ್ಸ್‌ಗಳಿಗೆ ರಾಷ್ಟ್ರಪತಿಗಳು ಪ್ರಮಾಣಪತ್ರ ನೀಡಿದರು. ರಾಜ್ಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀಮತಿ ಶಾಂತಾ.ವಿ ಆಚಾರ್ಯ, ರಾಯಚೂರು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ತಿಮ್ಮಯ್ಯ, ದಾವಣಗೆರೆ ಜಿಲ್ಲಾ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಮಹಮದ್ ವಾಸಿಲ್ ಮತ್ತು ನನಗೆ ರಾಷ್ಟ್ರ ಸಂಸ್ಥೆಯ ಅತ್ಯುನ್ನತ ಪ್ರಶಸ್ತಿ 'ಬೆಳ್ಳಿ ಆನೆ' ಪ್ರಶಸ್ತಿಯನ್ನು ರಾಷ್ಟ್ರಪತಿಗಳು ನೀಡಿರುತ್ತಾರೆ. ಇದಲ್ಲದೆ, ರಾಜ್ಯದ ಹಿರಿಯ ಕಾರ್ಯಕರ್ತರಾದ ಶ್ರೀಮತಿ ಪಿ. ಸರೋಜ, ಶ್ರೀಯುತರಾದ ಕೆ.ನರಸಿಂಹಮೂರ್ತಿ ಮತ್ತು ಪಿ.ವಿಶ್ವನಾಥ್ ಅವರುಗಳಿಗೆ ರಾಷ್ಟ್ರಪತಿಗಳು ಪ್ರಶಸ್ತಿಗಳನ್ನು ನೀಡಿಗೌರವಿಸಿದ್ದಾರೆ. ಸನ್ಮಾನಿತರೆಲ್ಲರಿಗೆ ನನ್ನ

ಅಭಿನಂದನೆಗಳು, ವೈಯಕ್ತಿಕವಾಗಿ ನನಗೆ ಬಂದಿರುವ ಈ ಗೌರವಕ್ಕಾಗಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಕೃತಜ್ಞನಾಗಿದ್ದೇನೆ ಮತ್ತು ಸ್ಕೌಟ್ಸ್-ಗೈಡ್ಸ್‌ಚಳುವಳಿಯ ಆದರ್ಶ ಹಾಗು ಚಿಂತನೆಗಳನ್ನು ನನ್ನ ಬದುಕಿನಲ್ಲಿ ಸದಾ ಅಳವಡಿಸಿಕೊಳ್ಳುತ್ತೇನೆ.

ನಮ್ಮ ರಾಜ್ಯದ ಸ್ಕೌಟ್ಸ್ ಮತ್ತು ಗೈಡ್ಸ್‌ನ ಮಹತ್ವಾಕಾಂಕ್ಷೆಯ ರಾಜ್ಯ ಪ್ರವಾಸೋದ್ಯಮ ಇಲಾಖೆಯ "ಕರ್ನಾಟಕ ದರ್ಶನ" ಕಾರ್ಯಕ್ರಮ ವಿವಿಧ ಜಿಲ್ಲೆಯ ಮೂರುವರೆ ಸಾವಿರ ಸ್ಕೌಟ್ಸ್-ಗೈಡ್ಸ್‌ಗಳು ರಾಜ್ಯದ ವಿವಿದ ಪ್ರದೇಶಗಳನ್ನು ಈ ತಿಂಗಳಲ್ಲಿ ಸಂದರ್ಶಿಸುತ್ತಿದ್ದಾರೆ. ಈ ಸುತ್ತಾಟದಲ್ಲಿ ಅವರು ರಾಜ್ಯದ ಎಲ್ಲಾ ಜಿಲ್ಲೆಗಳ ಪ್ರೇಕ್ಷಣೀಯ ಸುಂದರ ಸ್ಥಳಗಳನ್ನು ನೋಡುವುದರ ಜೊತೆಗೆ ನಮ್ಮ ರಾಜ್ಯದ ವಿವಿದ ಜಿಲ್ಲೆಗಳ ವೈವಿಧ್ಯಮಯ ಜೀವನವನ್ನು ಅರಿಯಲಿದ್ದಾರೆ. ದಿನಾಂಕ: 12.12.2015 ರಂದು ನಾನು ಶ್ರೀರಂಗಪಟ್ಟಣದಲ್ಲಿ ಗದಗ ಜಿಲ್ಲೆಯ ಮಕ್ಕಳೊಂದಿಗೆ "ಶಿಬಿರಾಗ್ನಿ" ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದೆ. ಮಕ್ಕಳ ಕುಶಲ ಕಲಾಪ್ರದರ್ಶನ, ಚಿಂತನಾಲಹರಿ, ಅಭಿವ್ಯಕ್ತಿ ಸಾಮರ್ಥ್ಯ ಕಾರ್ಯಕ್ರಮದ ಆಯೋಜನೆ ನನಗೆ ಸಂತಸವನ್ನುಂಟು ಮಾಡಿದೆ. ಕರ್ನಾಟಕ ದರ್ಶನದಲ್ಲಿ ಪಾಲ್ಗೊಂಡ ಎಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ನನ್ನ ಶುಭ ಹಾರೈಕೆ "ಸಂತಸ ಪಡಿರಿ- ನೋಡಿರಿ ಮತ್ತು ಕಲಿಯಿರಿ".

ಮುಂದಿನವರ್ಷ ಹತ್ತು ಸಾವಿರ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು "ಕರ್ನಾಟಕ ದರ್ಶನದ" ಕಾರ್ಯಕ್ರಮದಲ್ಲಿ ಭಾಗವಹಿಸಬೇಕೆಂಬುದು ನನ್ನ ಅಭಿಲಾಷೆ. ಕರ್ನಾಟಕ ಸರ್ಕಾರವು ಆರ್ಥಿಕ ಮತ್ತು ಇತರ ಸಹಾಯ ನೀಡಲಿದೆ. ನಾನು ಕರ್ನಾಟಕದ ಮುಖ್ಯಮಂತ್ರಿ ಸನ್ಮಾನ್ಯ ಶ್ರೀ ಸಿದ್ದರಾಮಯ್ಯ ಮತ್ತು ಭಾರಿಕೈಗಾರಿಕೆ ಹಾಗು ಪ್ರವಾಸೋದ್ಯಮ ಸಚಿವರಾದ ಸನ್ಮಾನ್ಯ ಶ್ರೀ ಆರ್.ವಿ.ದೇಶಪಾಂಡೆ ಅವರಿಗೆ ಅಭಾರಿಯಾಗಿದ್ದೇನೆ.

ಗೌರವಾನ್ವಿತ ಶ್ರೀ.ದಲಾಯಿಲಾಮ, ಬೌದ್ಧಧರ್ಮಗುರುಗಳು ಮತ್ತು ನೊಬೆಲ್ ಶಾಂತಿ ಪುರಸ್ಕೃತರನ್ನು ಬೆಂಗಳೂರಿನಲ್ಲಿ ಭೇಟಿಮಾಡುವ ಅಪೂರ್ವ ಅವಕಾಶ ನಮ್ಮ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ದೊರೆತಿತ್ತು. ಸ್ಕೌಟ್ಸ್- ಗೈಡ್ಸ್‌ಗಳೊಂದಿಗೆ ಸಂತಸವನ್ನು ಹಂಚಿಕೊಂಡ ಶ್ರೀ ದಲಾಯಿಲಾಮ ಅವರು ಮುಂದಿನ ಜನಾಂಗವು ಉತ್ತಮ ಪ್ರಪಂಚವನ್ನು ನಿರ್ಮಿಸಲಿ ಎಂದು ಹಾರೈಸಿರುತ್ತಾರೆ.

ರಾಜ್ಯದಾದ್ಯಂತ ಹಲವಾರು ಜಿಲ್ಲೆಗಳಲ್ಲಿ ಮೂಲ ತರಬೇತಿ ಶಿಬಿರಗಳು ಸತತವಾಗಿ ನಡೆಯುತ್ತಿದೆ. ಮುಂದಿನ ದಿನಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳಿವಳಿಯು ಬೃಹತ್ತಾಗಿ ಬೆಳೆದು, ಉತ್ತಮ ನಾಗರೀಕರನ್ನು ದೇಶಕ್ಕೆ ನೀಡುತ್ತದೆ ಎಂಬ ಭರವಸೆನನಗಿದೆ.

**ಮತ್ತೊಮ್ಮೆ ಎಲ್ಲರಿಗೂ ನೂತನ ವರುಷ**
**ಸಂತಸ, ನೆಮ್ಮದಿ, ಸಮೃದ್ಧಿಯುಂಟುಮಾಡಲಿ ಎಂದು ಆಶಿಸುತ್ತೇನೆ.**

**ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,**

**ತಮ್ಮ ವಿಶ್ವಾಸಿ**

**ಪಿ.ಜಿ.ಆರ್. ಸಿಂಧ್ಯ**
**ರಾಜ್ಯ ಮುಖ್ಯ ಆಯುಕ್ತರು**

# ರಾಜ್ಯ ಕಾರ್ಯದರ್ಶಿಗಳ ನುಡಿ

**2015**ರ ವರ್ಷದಲ್ಲಿ ಈ ಜಗತ್ತಿನ ಮನುಕುಲದ ಇತಿಹಾಸದ ನೆನಪುಗಳನ್ನು ಬೀಳ್ಕೊಟ್ಟು, 2016ನೇ ವರ್ಷವನ್ನು ಸ್ವಾಗತಿಸುವ ಹೊಸ್ತಿಲಲ್ಲಿ ನಿಂತಿದ್ದೇವೆ. ಈ ವರ್ಷದ ಡಿಸೆಂಬರ್ ತಿಂಗಳ 25 ರಂದು ನಮ್ಮ ಬಾಹ್ಯಾಕಾಶದಲ್ಲಿ ಐತಿಹಾಸಿಕ ದೃಶ್ಯಾವಳಿ ಗೋಚರಿಸಿತು. ಡಿಸೆಂಬರ್ 25 ಇಡೀ ಜಗತ್ತಿಗೆ "ನೆರೆಹೊರೆಯವರನ್ನು ಪ್ರೀತಿಸು" ಎಂದು ಸಂದೇಶ ನೀಡಿದ ಏಸುಪ್ರಭುವಿನ ಜನ್ಮದಿನ ಅದೇ ದಿನ ಸಂಜೆ ನಮ್ಮ ಭೂಮಿಯ ಉಪಗ್ರಹವಾದ ಚಂದ್ರ ಅಗಾಧ ಪ್ರಭೆಯಿಂದ ಭೂಮಿಗೆ ವಿಶೇಷ ಹುಣ್ಣಿಮೆಯ ಬೆಳಕು ನೀಡಿದೆ. ಅಂದು ಭೂಮಿಯಿಂದ ಸುಮಾರು 3 ಲಕ್ಷದ 84 ಸಾವಿರ ಕಿಲೋಮೀಟರ್ ದೂರವಿರುವ ಚಂದ್ರ 3 ಲಕ್ಷದ 64 ಸಾವಿರ ದೂರದ ಕಕ್ಷೆಯ ಸನಿಹಕ್ಕೆ ಬಂದು, ಜನರ ಕಣ್ಣಿಗೆ ಬೃಹದಾಕಾರದ ಬೆಳ್ಳಿ ಬೆಳಕಿನಂತೆ ಗೋಚರಿಸಿದ ಇದು ಈ ವರ್ಷದ ಕೊನೆಯವಾರದ ಬ್ಯಾಹ್ಯಾಕಾಶದಲ್ಲಿ ಕಂಡ ಬೆರಗು.

ಕಳೆದ ವರ್ಷ ನಮ್ಮ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಸಂಬಂಧಿಸಿದಂತೆ ಎಲ್ಲಾ ಜಿಲ್ಲೆಗಳಲ್ಲೂ ಅರ್ಥಪೂರ್ಣವಾದ ಕಾರ್ಯಕ್ರಮಗಳನ್ನು ಮಾಡಿ ಯಶಸ್ವಿಯಾಗಿವೆ. ಅದರಲ್ಲಿಯೂ ಜನವರಿ 15ರಲ್ಲಿ ದೊಡ್ಡಬಳ್ಳಾಪುರದ ಡಾ॥ ಆನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ ಜಾಂಬೋರೇಟ್ ವಿಶೇಷ ಉತ್ಸವವಾಗಿತ್ತು. ಈ ಜಾಂಬೋರೇಟ್ ಯಶಸ್ಸಿಗೆ ಸಂಬಂಧಿಸಿದಂತೆ ನಮ್ಮ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗೆ ಸಂಬಂಧಿಸಿದ ಅಧಿಕಾರಿಗಳು ನೌಕರರು ಸಿಬ್ಬಂದಿ, ತರಬೇತಿ ಶಿಕ್ಷಕರು ಮತ್ತು ಚಳವಳಿಯಲ್ಲಿರುವ ವಿದ್ಯಾರ್ಥಿಗಳು ಹಾಗೂ ಅವರ ಪೋಷಕ ವರ್ಗದವರ ಪಾಲ್ಗೊಳ್ಳುವಿಕೆ ಬಗ್ಗೆ ವಿಶೇಷವಾಗಿ ಅಭಿನಂಧಿಸುತ್ತೇವೆ. ಇದೇ ರೀತಿ ಕೊಂಡಜ್ಜಿ ಬಸಪ್ಪ ಅವರ ಜನ್ಮಶತಮಾನೋತ್ಸವವನ್ನು ಹಮ್ಮಿಕೊಂಡು ಎಲ್ಲಾ ಜಿಲ್ಲೆಗಳಲ್ಲಿ ಒಳ್ಳೆಯ ಕಾರ್ಯಕ್ರಮಗಳಾಗಿವೆ. ಈ ಚಳವಳಿಯ ಬೆಳವಣಿಗೆಗಾಗಿ ತ್ಯಾಗ ನಿಸ್ವಾರ್ಥ ಮನೋಭಾವದಿಂದ ದುಡಿದ ಹಿರಿಯರನ್ನು ಸ್ಮರಿಸಿ ಅವರುಗಳು ಹಾಕಿಕೊಟ್ಟ ದಿಟ್ಟ ಮಾರ್ಗದಲ್ಲಿ ಮುನ್ನೆಡೆಯುವುದು ನಮ್ಮ ಆದರ್ಶವಾಗಬೇಕು. ಈ ಹಿನ್ನೆಲೆಯಲ್ಲಿಯೇ ನಮ್ಮ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ, ಕರ್ನಾಟಕದ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಮುಖ್ಯ ಆಯುಕ್ತರಾಗಿ ಸೇವೆ ಸಲ್ಲಿಸಿ, ನಿವೃತ್ತರಾಗಿ ನಿಧನರಾದ ಹಿರಿಯರನ್ನು ಅವರ ಹುಟ್ಟಿದ ದಿನದಂದು ಸ್ಮರಿಸುವ ಕಾರ್ಯಕ್ರಮಗಳನ್ನು ಕಳೆದ ವರ್ಷದಿಂದ ಹಮ್ಮಿಕೊಂಡಿದ್ದಾರೆ. ಈ ಹಿನ್ನಲೆಯಲ್ಲಿ ಮೇಜರ್ ವೈ.ಎ.ಕೆ ಮೂರ್ತಿ, ಶ್ರೀ ವಿ.ಪಿ. ದೀನ್‌ದಯಾಳು ನಾಯ್ಡು, ಜಸ್ಟೀಸ್ ಕೆ. ಶಂಕರನಾರಾಯಣರಾವ್, ಶ್ರೀ ಜೆ.ವಿ. ಮಲ್ಲಾರಾಧ್ಯ ಅವರುಗಳ ಕುಟುಂಬ ವರ್ಗದವರನ್ನು ಆಹ್ವಾನಿಸಿ ಬೆಂಗಳೂರಿನ ಶಾಂತಿಗೃಹ ಕಛೇರಿಯಲ್ಲಿ ನೂತನ ಕಾರ್ಯಕ್ರಮಗಳು ಜರುಗಿವೆ. ಈ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದ ಅವರ ಕುಟುಂಬ ವರ್ಗದವರು ಆ ಹಿರಿಯರ ನೆನಪುಗಳನ್ನು ನಮ್ಮೊಂದಿಗೆ ಆಪ್ತವಾಗಿ

ಹಂಚಿಕೊಂಡಿದ್ದಾರೆ. ಇನ್ನು ಶ್ರೀ ಕೊಂಡಜ್ಜಿ ಬಸಪ್ಪವರ ಜನ್ಮಶತಮಾನೋತ್ಸವ ದೆಹಲಿಯ ಕರ್ನಾಟಕ ಸಂಘದ ಸಭಾಭವನದಲ್ಲಿ ನಡೆಸಲಾಯಿತು. ಈ ಸಂದರ್ಭದಲ್ಲಿ ದಿವಂಗತ ಕೊಂಡಜ್ಜಿ ಬಸಪ್ಪರವರ ಜೀವನ ಚರಿತ್ರೆ ಕುರಿತಂತೆ ನಮ್ಮ ಸಂಸ್ಥೆ ಪ್ರಕಟಿಸಿರುವ ಇಂಗ್ಲೀಷ್ ಪುಸ್ತಕವನ್ನು ಬಿಡುಗಡೆ ಮಾಡಲಾಯಿತು. ಪುಸ್ತಕದ ವಿನ್ಯಾಸವು ಆಕರ್ಷಕವಾಗಿದ್ದು, ಪುಟ ತೆರೆಯುತ್ತಾ ಹೋದಂತೆ ಕೊಂಡಜ್ಜಿ ಬಸಪ್ಪ ಅವರ ಸಾಧನೆ, ಜೀವನ ಯಾತ್ರೆಯ ಅನುಭವವಾಗುತ್ತದೆ. ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯಲ್ಲಿರುವ ಎಲ್ಲರೂ ಈ ಪುಸ್ತಕವನ್ನು ಓದಬೇಕು ಎನ್ನುವುದು ನನ್ನ ಅಭಿಪ್ರಾಯ.

ಕಳೆದ ವರ್ಷ ಜಾಗತಿಕವಾಗಿ ಅನೇಕ ವಿದ್ಯಮಾನಗಳು ನಡೆದಿವೆ ನೆರೆಯ ತಮಿಳುನಾಡಿನಲ್ಲಿ ಸುಮಾರು ಏಳೆಂಟು ದಿನ ವಾಯುಭಾರ ಕುಸಿತದಿಂದ ನಿರಂತರವಾಗಿ ಮಳೆಯಾಗಿ ಅನೇಕ ಕುಟುಂಬಗಳ ಸಂತ್ರಸ್ಥರಾಗಿದ್ದಾರೆ. ಸಂತ್ರಸ್ಥರಿಗೆ ನೆರವಾಗಲು ನಮ್ಮ ಸಂಸ್ಥೆಯಿಂದ ಹಣ ಹಾಗೂ ಅಗತ್ಯವಿರುವ ವಸ್ತುಗಳನ್ನು ಸಂಗ್ರಹಿಸಿ ಕಳುಹಿಸುವ ವ್ಯವಸ್ಥೆ ಮಾಡಲಾಗುತ್ತಿದೆ. 2016 ನಮ್ಮೆಲ್ಲರಿಗೂ ಸಂಭ್ರಮದ ವರ್ಷವಾಗ ಬೇಕು. ಕಳೆದ ವರ್ಷದ ಅನುಭವಗಳನ್ನು ದಾರಿ ದೀಪವಾಗಿಸಿಕೊಂಡು ನೂತನ ವರ್ಷವನ್ನು ಸ್ವಾಗತಿಸೋಣ 2015ರ ಡಿಸೆಂಬರ್ 31 ರಂದು ಜಗತ್ತಿನ ಎಲ್ಲಾ ಸ್ಥಳಗಳಲ್ಲಿಯೂ ಹೊಸ ವರ್ಷದ ಸಂಭ್ರಮಾಚರಣೆ ಹಬ್ಬವಾಗಿ ಪರಿವರ್ತನೆಯಾಗಿ ಬಿಡುತ್ತದೆ. ಈ ಹಬ್ಬ ಯುವಸಮುದಾಯದವರ ಅಮಲು ಹಾಗೂ ಅಹಂಕಾರವನ್ನು ಹೆಚ್ಚಿಸದಿರಲಿ ಎಂದು ಪ್ರಾರ್ಥಿಸೋಣ, ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯಲ್ಲಿ ಅರ್ಥಪೂರ್ಣವಾಗಿ ಮತ್ತು ಪ್ರಾಮಾಣಿಕವಾಗಿ ಪಾಲ್ಗೊಳ್ಳುತ್ತೇವೆ ಎಂಬ ನಿಲುವು ನಮ್ಮದಾಗಿರಲಿ ಎಂದು ಹಾರೈಸುತ್ತೇವೆ.

ತಮ್ಮ ವಿಶ್ವಾಸಿ

ಸಿದ್ದಯ್ಯ

ರಾಜ್ಯ ಕಾರ್ಯದರ್ಶಿ

“**Be Prepared... the meaning of the motto is that a scout must prepare himself by previous thinking out and practicing how to act on any accident or emergency so that he is never taken by...**



**- Sir Baden Powell**”

## 'ದೆಹಲಿ ಕರ್ನಾಟಕ ಸಂಘ ಸಭಾಂಗಣದಲ್ಲಿ ಜರುಗಿದ ಕೊಂಡಜ್ಜಿ ಬಸಪ್ಪ ಜನ್ಮಶತಮಾನೋತ್ಸವ ಕಾರ್ಯಕ್ರಮ'

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯ ಆಶ್ರಯದಲ್ಲಿ ನವದೆಹಲಿಯ ಕರ್ನಾಟಕ ಸಂಘದ ಸಭಾಂಗಣದಲ್ಲಿ ದಿನಾಂಕ : 28.11.2015 ರಂದು ಸಂಜೆ ದಿವಂಗತ ಕೊಂಡಜ್ಜಿ ಬಸಪ್ಪ ಅವರ ಜನ್ಮಶತಮಾನೋತ್ಸವ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು.

"ಸ್ವಂತಕ್ಕಾಗಿ ಏನನ್ನು ಬಯಸದೇ ಸ್ಕೌಟ್ಸ್ ಮತ್ತು ಗೈಡ್ಸ್ ಮೂಲಕ ಸಮಾಜದ ಏಕತೆಗಾಗಿ ಶ್ರಮಿಸಿದ ಕೊಂಡಜ್ಜಿ ಬಸಪ್ಪನವರ ಜೀವನ ಅನುಕರಣೀಯ. ಕೇವಲ ಸಮಾಜಕ್ಕಾಗಿ ತನ್ನ ಜೀವನವನ್ನು ಮುಡಿಪಾಗಿಡುವ ಜನ ವಿರಳವಾಗುತ್ತಿದ್ದು ಇಂದಿನ ಯುವಕ ಯುವತಿಯರು ಕೊಂಡಜ್ಜಿ ಬಸಪ್ಪನವರಂತೆ ಆದರ್ಶ ಜೀವನ ನಡೆಸಬೇಕು" ಎಂದು ಸುಪ್ರೀಂ ಕೋರ್ಟ್ ನ್ಯಾಯಮೂರ್ತಿ ಶ್ರೀ.ವಿ.ಗೋಪಾಲ ಗೌಡರು ಹೇಳಿದರು.

ದೆಹಲಿ ಕರ್ನಾಟಕ ಸಂಘದಲ್ಲಿ ಏರ್ಪಡಿಸಿದ್ದ ಕೊಂಡಜ್ಜಿ ಬಸಪ್ಪನವರ ಜನ್ಮಶತಾಬ್ಧಿ ಆಚರಣೆ ಕಾರ್ಯಕ್ರಮದಲ್ಲಿ ಮುಖ್ಯ ಭಾಷಣ ಮಾಡಿದ ನ್ಯಾಯಮೂರ್ತಿ ಶ್ರೀ ಗೋಪಾಲ ಗೌಡರು, "ತನ್ನ ಮಗಳ ಮದುವೆಗಾಗಿ ಮಾಡಿದ್ದ ಖರ್ಚನ್ನು ಸರಿದೂಗಿಸಲು ಕೊಂಡಜ್ಜಿ ಬಸಪ್ಪನವರು ಕೇಂದ್ರ ಮಂತ್ರಿಯಾಗಿದ್ದಾಗಲೇ ಅವರ ಕಾರನ್ನು ಮಾರಿದ್ದರು. ಇಂಥ ರಾಜಕಾರಣಿ ಸಿಗುವುದು ಇಂದು ಅಪರೂಪ" ಎಂದು ಹಳೆಯ ನೆನಪುಗಳನ್ನು ಬಿಚ್ಚಿಟ್ಟರು.

ಕೊಂಡಜ್ಜಿ ಬಸಪ್ಪನವರ ಬಗ್ಗೆ ರಾಜ್ಯ ಸಂಸ್ಥೆ ಪ್ರಕಟಿಸಿರುವ "ಕೊಂಡಜ್ಜಿ ಬಸಪ್ಪ" ಇಂಗ್ಲೀಷ್ ಪುಸ್ತಕವನ್ನು ಬಿಡುಗಡೆ ಮಾಡಿದ ಲೋಕಸಭಾ ಸದಸ್ಯರು ಹಾಗೂ ಲೋಕಸಭೆಯ ಕಾಂಗ್ರೆಸ್ ಪಕ್ಷದ ನಾಯಕರಾದ ಶ್ರೀ ಮಲ್ಲಿಕಾರ್ಜುನ ಖರ್ಗೆ ಅವರು "1976 ರಲ್ಲಿ ನಾನು ಕರ್ನಾಟಕದ ಪ್ರಾಥಮಿಕ ಶಿಕ್ಷಣ ಮಂತ್ರಿಯಾಗಿದ್ದಾಗ ನನ್ನನ್ನು ಅರಮನೆ ರಸ್ತೆಯ ಸ್ಕೌಟ್ ಮತ್ತು ಗೈಡ್ಸ್ ಕಚೇರಿಗೆ ಕರೆದುಕೊಂಡು ಹೋಗಿ ಗೌರವಿಸಿದರು ಹಾಗೂ ಅವರ ನಿಸ್ವಾರ್ಥ ಸಮಾಜ ಸೇವೆ ನಮಗೆಲ್ಲ ಮಾದರಿ ಇಂಥ ಜನ ಈಗ ಸಮಾಜದಲ್ಲಿ ಕಡಿಮೆಯಾಗಿದ್ದಾರೆ" ಎಂದು ತಮ್ಮ ಸವಿನೆನಪುಗಳನ್ನು ಸಭೆಯಲ್ಲಿ ಹಂಚಿಕೊಂಡರು. ಮಾಜಿ ಮುಖ್ಯಮಂತ್ರಿ ಶ್ರೀ ನಿಜಲಿಂಗಪ್ಪನವರು ತಮ್ಮ ಸಂಪುಟದಲ್ಲಿದ್ದ ಕೊಂಡಜ್ಜಿ ಬಸಪ್ಪನವರ ಬಗ್ಗೆ ಅತ್ಯುತ್ತಮ ಅಭಿಪ್ರಾಯ ವ್ಯಕ್ತಪಡಿಸಿರುವುದೇ ಅವರ ವ್ಯಕ್ತಿತ್ವಕ್ಕೆ ಸಾಕ್ಷಿ ಎಂದರು.

ಕಾರ್ಯಕ್ರಮದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಮುಖ್ಯ ರಾಷ್ಟ್ರೀಯ ಆಯುಕ್ತ ಶ್ರೀ ಬಿ.ಐ. ನಾಗರಾಳೆ ಅವರು ಕೊಂಡಜ್ಜಿ ಬಸಪ್ಪ ಅವರು ಕರ್ನಾಟಕದ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಮತ್ತು ಸಹಕಾರಿ ಚಳವಳಿಗೆ ಕೊಟ್ಟ ಕೊಡುಗೆಯನ್ನು ಬಣ್ಣಿಸಿ ಅವರೊಬ್ಬ ರಾಷ್ಟ್ರದ ಹೆಮ್ಮೆಯ ಪುತ್ರ ಎಂದರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಕೇಂದ್ರ ಸಚಿವರಾದ ಶ್ರೀ ಜಿ.ಎಂ. ಸಿದ್ದೇಶ್ವರ್ ಅವರು ಕೊಂಡಜ್ಜಿ ಬಸಪ್ಪನವರಿಗೂ ತಮ್ಮ ತಂದೆಯವರಿಗೂ ಇದ್ದ ಸಂಬಂಧವನ್ನು ಮೆಲುಕು ಹಾಕಿದರಲ್ಲದೆ ಅವರೊಬ್ಬ ಆದರ್ಶ ರಾಜಕಾರಣಿ. ಅಂಥವರು ಈಗಿನ ದಿನಗಳಲ್ಲಿ ಅಪರೂಪ ಎಂದು ಹೇಳಿದರು. ಅವರು ಪ್ರತಿನಿಧಿಸಿದ ಕ್ಷೇತ್ರವನ್ನು ತಾವು ಇಂದು ಪ್ರತಿನಿದಿಸುತ್ತಿದ್ದು ನಿಜಕ್ಕೂ ನನಗೆ ಹೆಮ್ಮೆ ಎಂದರು. ಕರ್ನಾಟಕದಲ್ಲಿ ಸ್ಕೌಟ್ಸ್ ಗೈಡ್ಸ್ ಚಳವಳಿಯೊಂದಿಗೆ ಕೊಂಡಜ್ಜಿ ಬಸಪ್ಪ ಅವರು ಹೆಸರು ಚಿರಸ್ಮರಣೀಯ ಎಂದು ಬಣ್ಣಿಸಿದರು.

ಕಾರ್ಯಕ್ರಮದಲ್ಲಿ ಸ್ವಾಗತ ಭಾಷಣ ಮಾಡಿದ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ.ಪಿ.ಜಿ.ಆರ್.ಸಿಂಧ್ಯ ಅವರು ಇಂದು ಕರ್ನಾಟಕದಲ್ಲಿ ಸ್ಕೌಟ್ಸ್-ಗೈಡ್ಸ್ ಆಂದೋಲನ ಬೆಳೆಯಲು ಕೊಂಡಜ್ಜಿ ಬಸಪ್ಪ ಅವರ ತ್ಯಾಗವನ್ನು ಸ್ಮರಿಸುವುದು ಕರ್ತವ್ಯ. ನಾನೊಬ್ಬ ರಾಜಕಾರಣಿಯಾಗಿ ಕೂಡ ಅವರ ವ್ಯಕ್ತಿತ್ವವನ್ನು ಸ್ಮರಿಸುತ್ತೇನೆ ಎಂದು ಹೇಳಿದರು.ಅವರು ಹಾಕಿಕೊಟ್ಟ ಮಾರ್ಗದರ್ಶನದಲ್ಲಿ ನಾವುಗಳು ಸಾಗುವುದೇ ನಾವು ತೋರಿಸುವ ಗೌರವ ಎಂದರು.

ಕಾರ್ಯಕ್ರಮದಲ್ಲಿ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು, ರಾಜ್ಯ ಮತ್ತು ರಾಷ್ಟ್ರೀಯ ಸಂಸ್ಥೆ, ಶ್ರೀಮತಿ.ಸರೋಜ.ವಿ.ನಾಯ್ಡು, ಉಪಾಧ್ಯಕ್ಷಿಣಿ, ರಾಜ್ಯ ಸಂಸ್ಥೆ, ರಾಜ್ಯ ಆಯುಕ್ತರುಗಳಾದ ಶ್ರೀ ಎಂ.ಎ.ಖಾಲಿದ್, ಹಾಗೂ ಶ್ರೀಮತಿ ಗೀತಾ ನಟರಾಜ್, ಜಂಟಿ ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಸಿ.ಎಸ್. ರೆಡ್ಡಿ, ಶ್ರೀಮತಿ ಎಸ್.ಕೆ. ಪ್ರಭಾ ರಾಜ್ಯ ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀ ಮೋಹನ್‌ಕುಮಾರ್ ಕೊಂಡಜ್ಜಿ, ಕೇಂದ್ರ ಸ್ಥಾನಿಕ ಆಯುಕ್ತರು, ರಾಜ್ಯ ಸಹಾಯಕ ಆಯುಕ್ತರುಗಳು, ಶ್ರೀ ಬಿ.ಆರ್. ಅನಿಲ್ ಕುಮಾರ್, ಆಜೀವ ಸದಸ್ಯರು, ರಾಷ್ಟ್ರೀಯ ಸಂಸ್ಥೆ ನಿರ್ದೇಶಕರು ಮತ್ತು ರಾಷ್ಟ್ರೀಯ ಪರಿಷತ್ತಿನ ಸದಸ್ಯರುಗಳು, ದೆಹಲಿ ಕರ್ನಾಟಕ ಸಂಘದ ಪದಾಧಿಕಾರಿಗಳು, ದೆಹಲಿಯ ಸ್ಕೌಟ್ಸ್, ಗೈಡ್ಸ್, ರೋವರ್ಸ್ ಮತ್ತು ರೇಂಜರ್ಸ್‌ಗಳು ಮತ್ತು ರಾಜ್ಯ ಪದಾಧಿಕಾರಿಗಳು ಉಪಸ್ಥಿತರಿದ್ದರು, ಶ್ರೀಮತಿ ಪಿ. ಸರೋಜ. ಸಂಚಾಲಕರು, ಕೊಂಡಜ್ಜಿ ಬಸಪ್ಪ ಜನ್ಮಶತಮಾನೋತ್ಸವ ಸಮಿತಿ, ಇವರು ಕಾರ್ಯಕ್ರಮ ಯಶಸ್ವಿಯಾಗಲು ಸಹಕರಿಸಿದರು.

## ರಾಜ್ಯ ಮಟ್ಟದ ತರಬೇತಿ ಸಲಹೆಗಾರರ ತರಬೇತಿ ಶಿಬಿರ

ರಾಜ್ಯ ಮಟ್ಟದ ತರಬೇತಿ ಸಲಹೆಗಾರರ ತರಬೇತಿ ಶಿಬಿರವನ್ನು ದಿನಾಂಕ: 20.11.2015 ರಿಂದ 22.11.2015 ರವರೆಗೆ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆಯ ಸಹಯೋಗದೊಂದಿಗೆ ಪಿಲಿಕುಳ ನಿಸರ್ಗಧಾಮ, ಪಿಲಿಕುಳ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರದಲ್ಲಿ ಸಂಘಟಿಸಲಾಯಿತು.

ಸ್ಕೌಟ್ಸ್ ವಿಭಾಗದಿಂದ 44 ಶಿಬಿರಾರ್ಥಿಗಳು 5 ಸಿಬ್ಬಂದಿ ವರ್ಗ ಶಿಬಿರದಲ್ಲಿ ಭಾಗವಹಿಸಿದ್ದರು. ಶ್ರೀಕೆ.ಜಿ.ಗೋಪಾಲಕೃಷ್ಣ ಎಲ್.ಟಿ.(ಸ್ಕೌಟ್ಸ್) ರವರು ಶಿಬಿರದ ನಾಯಕರಾಗಿ ಕೆಲಸ ನಿರ್ವಹಿಸಿದರು. ಗೈಡ್ಸ್ ವಿಭಾಗದಿಂದ 28. ಶಿಬಿರಾರ್ಥಿಗಳು ಭಾಗವಹಿಸಿದ್ದರು. ನಾಯಕರಾಗಿ ಶ್ರೀಮತಿ ಚಂದ್ರಕಲಾ, ಎ.ಎಲ್.ಟಿ(ಗೈ) ಕಾರ್ಯ ನಿರ್ವಹಿಸಿದರು.

ಶ್ರೀಮತಿ ಎಸ್.ಕೆ. ಪ್ರಭಾ, ರಾಜ್ಯ ಜಂಟಿ ಕಾರ್ಯದರ್ಶಿ, ಎನ್.ಕೆ.ಛಾಯ, ಎ.ಎಸ್.ಸಿ.(ಗೈ), ಎಲ್.ಟಿ. ಲೋಕೇಶ್, ರಾಜ್ಯ ತರಬೇತಿ ಆಯುಕ್ತರು(ಸ್ಕೌಟ್ಸ್), ಕೆ.ವಿ.ಶ್ಯಾಮಲ ರಾಜ್ಯ ತರಬೇತಿ ಆಯುಕ್ತರು (ಗೈಡ್ಸ್), ಶ್ರೀ ಎಂ. ಪ್ರಭಾಕರ್ ಭಟ್, ಎ.ಎಸ್.ಓ.ಸಿ, ಎಂ.ಜಿ.ಕೆ. ಜೆ ಎ.ಎಲ್.ಟಿ(ಸ್ಕೌಟ್ಸ್), ಶ್ರೀ ಯು.ಜಿ.ಕೆ. ಭಟ್ ಎಲ್.ಟಿ.(ಎಸ್), ಶಿಬಿರಕ್ಕೆ ಭೇಟಿ ನೀಡಿದರು.

ದಿನಾಂಕ: 22 ರಂದು ಬೆಳಗ್ಗೆ ಶಿಬಿರದಲ್ಲಿ ಸರ್ವಧರ್ಮ ಪ್ರಾರ್ಥನೆ ನಡೆಸಲಾಯಿತು.

ಸಮಾರೋಪ ಸಮಾರಂಭವು ದಿನಾಂಕ 22.11.2015 ರಂದು ಶ್ರೀ.ಎನ್.ಜಿ.ಮೋಹನ್ ರವರ ಅಧ್ಯಕ್ಷತೆಯಲ್ಲಿ ನಡೆಯಿತು. ಶ್ರೀ ಸಂತೋಷ ಕುಮಾರ್ ಕದ್ರಿ, ಶ್ರೀ ರಾಜು ಶೇಷಗಾರ, ಜಿಲ್ಲಾ ಆಯುಕ್ತರು ಸ್ಕೌಟ್ಸ್, ಉಪಸ್ಥಿತರಿದ್ದರು.

## ರಾಜ್ಯ ಮಟ್ಟದ ಪದಕ ಪರೀಕ್ಷಕರ ಮತ್ತು ಪದಕ ಭೋದಕರ ತರಬೇತಿ ಶಿಬಿರ

ದಿನಾಂಕ: 20.11.2015 ರಿಂದ 22.11.2015 ರವರೆಗೆ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆಯ ಸಹಯೋಗದೊಂದಿಗೆ ರಾಜ್ಯ ಮಟ್ಟದ ಪದಕ ಪರೀಕ್ಷಕರ ಮತ್ತು ಪದಕ ಭೋದಕರ ತರಬೇತಿ ಶಿಬಿರವನ್ನು ಪಿಲಿಕುಳ ನಿಸರ್ಗ ಧಾಮ ಮಂಗಳೂರಿನಲ್ಲಿ ಏರ್ಪಡಿಸಲಾಗಿತ್ತು.

ಶ್ರೀ ಬಿ. ಆನಂದ ಅಡಿಗ ಎಲ್.ಟಿ.(ಸ್ಕೌಟ್ಸ್) ಉಡುಪಿ ಜಿಲ್ಲೆ ಇವರು ಶಿಬಿರದ ನಾಯಕರಾಗಿ ಸೇವೆ ಸಲ್ಲಿಸಿದರು. ಶ್ರೀ.ಎಲ್.ಟಿ.ಲೋಕೇಶ್, ರಾಜ್ಯ ತರಬೇತಿ ಆಯುಕ್ತರು(ಸ್ಕೌಟ್ಸ್) ಶಿಬಿರದ ಮೇಲ್ವಿಚಾರಕರಾಗಿ ಕಾರ್ಯ ನಿರ್ವಹಿಸಿದರು.

ಶಿಬಿರದಲ್ಲಿ 14 ಅಂಶಗಳ ಅದರ್ಶಗಳು, ಮೂಲಭೂತ ತತ್ವಗಳು, ಸ್ಕೌಟ್ಸ್–ಗೈಡ್ಸ್‌ನ ಪದಕಗಳ ವಿಧಗಳು, ಪದಕಗಳನ್ನು ನಡೆಯುವ ಕುರಿತು ಮಾಹಿತಿ, ಯುವ ಕಾರ್ಯಕ್ರಮ, ತರಬೇತಿ ಸಲಹೆಗಾರರು ಪದಕಗಳನ್ನು ಪಡೆಯಲು ಮಾರ್ಗದರ್ಶನ ನೀಡುವ ಕುರಿತು, ಪದಕ ಪರೀಕ್ಷಕರ ಕರ್ತವ್ಯಗಳು, ಪದಕ ಭೋದಕರ ಕರ್ತವ್ಯ ಮತ್ತು ಜವಾಬ್ದಾರಿಗಳ ಕುರಿತು, ಸಾರ್ವಜನಿಕ ಸಂಪರ್ಕ ಮುಂತಾದ ವಿಷಯಗಳ ಕುರಿತು ಮಾಹಿತಿ ನೀಡಲಾಯಿತು.

ದಿನಾಂಕ: 21.11.2015 ರಂದು ಮಕ್ಕಳ ಹಬ್ಬ ಕಾರ್ಯಕ್ರಮ ವೀಕ್ಷಿಸುವ ಸಲುವಾಗಿ ಶಿಬಿರಾರ್ಥಿಗಳನ್ನು ಪಿಲಿಕುಳ ಸೈನ್ಯ ಕೇಂದ್ರಕ್ಕೆ ಕಳುಹಿಸಲಾಗಿತ್ತು. ದಿನಾಂಕ: 22.11.2015 ರಂದು ಶ್ರೀ.ಎನ್.ಜಿ.ಮೋಹನ್ ಜಿಲ್ಲಾ ಮುಖ್ಯ ಆಯುಕ್ತರ

ಅಧ್ಯಕ್ಷತೆಯಲ್ಲಿ ಸಮಾರೋಪ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಶ್ರೀ ರಾಮಶೇಷ ಶೆಟ್ಟಿ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀ ಸಂತೋಷ ಕುಮಾರ್ ಕದ್ರಿ ಜಿಲ್ಲಾ ಕಾರ್ಯದರ್ಶಿ, ಜಿಲ್ಲಾ ಮತ್ತು ರಾಜ್ಯ ಸಂಸ್ಥೆಯ ಪದಾಧಿಕಾರಿಗಳು ಸಮಾರಂಭದಲ್ಲಿ ಉಪಸ್ಥಿತರಿದ್ದರು. ರಾಜ್ಯಾದ್ಯಂತ 35 ಶಿಬಿರಾರ್ಥಿಗಳು ಈ ಶಿಬಿರದಲ್ಲಿ ಭಾಗವಹಿಸಿದ್ದರು.

## ರಾಜ್ಯಮಟ್ಟದ ರೋವರ್ ಲೀಡರ್ಸ್‌ಗಳ ಮತ್ತು ರೇಂಜರ್ ಲೀಡರ್ಸ್‌ಗಳ ಮೂಲ ತರಬೇತಿ ಶಿಬಿರಗಳು

ದಿನಾಂಕ:23-11-2015 ರಿಂದ 29-11-2015 ರ ರವರೆಗೆ ರಾಜ್ಯಮಟ್ಟದ ರೋವರ್ಸ್ ಸ್ಕೌಟ್ಸ್ ಲೀಡರ್ಸ್‌ಗಳ ಮತ್ತು ರೇಂಜರ್ಸ್‌ಗಳ ಮೂಲ ತರಬೇತಿ ಶಿಬಿರವನ್ನು ದಕ್ಷಣ ಕನ್ನಡ ಜಿಲ್ಲಾ ಸಂಸ್ಥೆಯ ಸಹಯೋಗದೊಂದಿಗೆ ಪಿಲಿಕುಳ ನಿಸರ್ಗದಾಮ ಪಿಲಿಕುಳ ಜಿಲ್ಲಾ ತರಬೇತಿ ಕೇಂದ್ರದಲ್ಲಿ ಏರ್ಪಡಿಸಲಾಗಿತ್ತು.

ಬೇಸಿಕ್ ರೋವರ್ ಲೀಡರ್ ತರಬೇತಿ ಶಿಬಿರದಲ್ಲಿ 48 ಶಿಬಿರಾರ್ಥಿಗಳು ಭಾಗವಹಿಸಿದ್ದು, ಶ್ರೀ ಎ.ಎಂ. ಶಂಕರ್, ಎಲ್.ಟಿ.(ರೋ) ನಾಯಕರಾಗಿದ್ದರು.

ರೇಂಜರ್ಸ್ ಲೀಡರ್ಸ್ ತರಬೇತಿ ಶಿಬಿರದಲ್ಲಿ 39 ಶಿಬಿರಾರ್ಥಿಗಳು ಭಾಗವಹಿಸಿದ್ದು ಸಿಸ್ಟರ್ ರಜಿತಾ. ಎಲ್.ಟಿ(ರೇ), ಕೇರಳ ರಾಜ್ಯ ಇವರು ನಾಯಕಿಯಾಗಿದ್ದರು.

ಶಿಬಿರದ ಸಮಾರೋಪ ಸಮಾರಂಭವು ದಿನಾಂಕ:29/11/2015 ರಂದು ಶ್ರೀ.ಎನ್.ಜಿ. ಮೋಹನ್ ಜಿಲ್ಲಾ ಮುಖ್ಯ ಆಯುಕ್ತರು ದಕ್ಷಿಣ ಕನ್ನಡ ಜಿಲ್ಲೆ ಇವರ ಅಧ್ಯಕ್ಷತೆಯಲ್ಲಿ ನಡೆಯಿತು. ಡಾ|| ಮಾಧವರಾವ್, ವಿಶೇಷಾಧಿಕಾರಿಗಳು, ಮಂಗಳೂರು ವಿಶ್ವವಿದ್ಯಾಲಯ ಮತ್ತು ಶ್ರೀ ಮಾಧವ ಭಟ್, ನಿವೃತ್ತ ಪ್ರಾಂಶುಪಾಲರು, ಸ್ವಾಮಿ ವಿವೇಕಾನಂದ ಕಾಲೇಜು ಪುತ್ತೂರು, ಶ್ರೀ ವಾಸುದೇವ ಬೋಲಾರ, ಖಜಾಂಚಿಗಳು, ಶ್ರೀ ರಾಮಶೇಷಶೆಟ್ಟಿ ಡಿ.ಸಿ.(ಎಸ್), ಐರಿನ್ ಡಿಕುನ್ಹ ಡಿ.ಸಿ.(ಜಿ) ಸಮಾರಂಭದಲ್ಲಿ ಉಪಸ್ಥಿತರಿದ್ದರು.

## ರಾಜ್ಯ ಮಟ್ಟದ ಯೋಜನಾ ಸಮಿತಿ ಸಭೆ

ದಿನಾಂಕ 05.12.2015 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯ ವತಿಯಿಂದ ರಾಜ್ಯ ಮಟ್ಟದ ಯೋಜನಾ ಸಮಿತಿ ಸಭೆಯನ್ನು ರಾಜ್ಯ ಕೇಂದ್ರ ಕಾರ್ಯಾಲಯ, ಶಾಂತಿಗೃಹದಲ್ಲಿ ಏರ್ಪಡಿಸಲಾಗಿತ್ತು.

ಈ ಸಭೆಯನ್ನು ಸನ್ಮಾನ್ಯ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಅವರ ಅಧ್ಯಕ್ಷತೆಯಲ್ಲಿ ನಡೆಸಲಾಯಿತು. ಚನ್ನೈನಲ್ಲಿ ನಡೆದ ಪ್ರಕೃತಿ ವಿಕೋಪದಲ್ಲಿ ಕುರಿತು ನೊಂದವರಿಗೆ ನೆರವು ನೀಡುವ ಕುರಿತು ಚರ್ಚಿಸಿ ವಿವಿಧ ಜಿಲ್ಲೆಗಳಿಂದ ಸಹಾಯ ಮಾಡುವಂತೆ ಕೋರಲಾಯಿತು. ಮತ್ತು ರಾಜ್ಯ ಸಂಸ್ಥೆಯಿಂದ ಅಗತ್ಯ ವಸ್ತುಗಳನ್ನು ಸಂಗ್ರಹಿಸಿ ನೊಂದವರಿಗೆ ನೆರವು ನೀಡುವ ಕುರಿತು ಚರ್ಚಿಸಲಾಯಿತು.

ಈ ಸಭೆಯಲ್ಲಿ ರಾಜ್ಯ ಮಟ್ಟದ 2016-17 ರ ಸಾಲಿನ ವಾರ್ಷಿಕ ಯೋಜನೆಗಳು ಕುರಿತು ಮತ್ತು ಜಿಲ್ಲಾ ಮಟ್ಟದಲ್ಲಿ ನಡೆಸಬೇಕಾದ 2016-17ರ ಸಾಲಿನ ವಾರ್ಷಿಕ ಕಾರ್ಯಕ್ರಮಗಳು ತರಬೇತಿ ಶಿಬಿರಗಳು ರಾಜ್ಯ ಸಂಸ್ಥೆಯು ಜಿಲ್ಲೆಗಳಿಗೆ ನಿಗದಿ ಪಡಿಸಿದ ಸ್ಕೌಟ್ಸ್-ಗೈಡ್ಸ್ ಗಣತಿಯನ್ನು ಪೂರ್ಣಗೊಳಿಸುವ ಕುರಿತು ಚರ್ಚಿಸಲಾಯಿತು. ಜಿಲ್ಲಾ ಮಟ್ಟಗಳಲ್ಲಿ ನಡೆಸುವ ಕಾರ್ಯಕ್ರಮಗಳ ಕುರಿತು ಜಿಲ್ಲಾ ಪದಾಧಿಕಾರಿಗಳು ತಮ್ಮ ಅಭಿಪ್ರಾಯಗಳನ್ನು ಪ್ರತ್ಯೇಕವಾಗಿ ನೀಡಿದರು.

ರಾಜ್ಯ ಮುಖ್ಯ ಆಯುಕ್ತರು ಸಭೆಯ ಅಧ್ಯಕ್ಷತೆಯನ್ನು ವಹಿಸಿ ಮಾತನಾಡುತ್ತಾ ಕೊಂಡಜ್ಜಿ ಬಸಪ್ಪರವರ ಜನ್ಮ ಶತಮಾನೋತ್ಸವವನ್ನು ಎಲ್ಲಾ ಜಿಲ್ಲೆಗಳಲ್ಲಿ ಮತ್ತು ದೆಹಲಿಯಲ್ಲಿ ನಡೆಸಿದ ಕುರಿತು ಪ್ರಶಂಶಿಸಿ, ಸ್ಥಳೀಯ ಸಂಸ್ಥೆಗಳು ಮತ್ತು ಜಿಲ್ಲಾ ಸಂಸ್ಥೆಗಳು ಸ್ವತಂತ್ರವಾಗಿ ಕಾರ್ಯನಿರ್ವಹಿಸಬೇಕು ಮತ್ತು ಬಲಿಷ್ಠವಾಗಬೇಕೆಂದು ತಿಳಿಸಿದರು. ವಯಸ್ಕರ ತರಬೇತಿ ಶಿಬಿರಗಳು, ಸ್ಕೌಟ್ಸ್-ಗೈಡ್ಸ್, ರೋವರ್ಸ್ ರೇಂಜರ್ಸ್ ಚಟುವಟಿಕೆಗಳು, ಕರ್ನಾಟಕ ದರ್ಶನಕ್ಕೆ ಸ್ಕೌಟ್ಸ್-ಗೈಡ್ಸ್‌ಗಳನ್ನು ನಿಯೋಜಿಸುವ ಕುರಿತು ಜಿಲ್ಲಾ ಸಂಸ್ಥೆಗಳ ರೆಕಾರ್ಡ್ ಮತ್ತು ಟ್ರಸ್ಟ್ ಮಾಡುವ ಕುರಿತು ಕ್ರಮ ಕೈಗೊಳ್ಳಬೇಕೆಂದು ಜಿಲ್ಲಾ ಪದಾಧಿಕಾರಿಗಳಿಗೆ ಸೂಚಿಸಿದರು.

ಸಭೆಯಲ್ಲಿ ಶ್ರೀ ಎಂ.ಎ. ಖಾಲಿದ್, ರಾಜ್ಯ ಆಯುಕ್ತರು(ಸ್ಕೌಟ್ಸ್) ಶ್ರೀಮತಿ ಗೀತಾ ನಟರಾಜ್. ರಾಜ್ಯ ಆಯುಕ್ತರು(ಗೈಡ್ಸ್), ರಾಜ್ಯ ಜಂಟಿ ಕಾರ್ಯದರ್ಶಿಗಳಾದ ಶ್ರೀ ಸಿ.ಎಸ್. ರೆಡ್ಡಿ, ಶ್ರೀಮತಿ ಎಸ್.ಕೆ. ಪ್ರಭಾ ರವರು ಉಪಸ್ಥಿತರಿದ್ದು ಸಭೆಯಲ್ಲಿ ಮಾರ್ಗದರ್ಶನ ಮಾಡಿದರು.

## ರಾಜ್ಯ ಮಟ್ಟದ ಆಯುಕ್ತರುಗಳ ಮತ್ತು ಕಾರ್ಯದರ್ಶಿಗಳ ಸಮಾವೇಶ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆಯ ವತಿಯಿಂದ ರಾಜ್ಯಮಟ್ಟದ ಜಿಲ್ಲಾ ಆಯುಕ್ತರುಗಳ ಮತ್ತು ಕಾರ್ಯದರ್ಶಿಗಳ ಸಮಾವೇಶವನ್ನು ದಿನಾಂಕ: 04-12-2015 ರಂದು ರಾಜ್ಯ ಕೇಂದ್ರ ಕಾರ್ಯಾಲಯದಲ್ಲಿ ನಡೆಸಲಾಯಿತು. ಸಮಾವೇಶದಲ್ಲಿ ಜಿಲ್ಲೆಗಳ ಸ್ಕೌಟ್ಸ್-ಗೈಡ್ಸ್‌ಗಳ ಗಣತಿಯ ಕುರಿತು, ರಾಜ್ಯ ಮಟ್ಟದ ಹಾಗೂ ರಾಷ್ಟ್ರೀಯ ಮಟ್ಟದ ತರಬೇತಿಗಳಿಗೆ ನಿಯೋಜನೆ ಕುರಿತು, ಜಿಲ್ಲೆಗಳಲ್ಲಿ ವಯಸ್ಕರ ನಾಯಕರ ತರಬೇತಿಗಳನ್ನು ಸಂಘಟಿಸುವ ಕುರಿತು ಚರ್ಚಿಸಲಾಯಿತು.

ಸಮಾವೇಶದಲ್ಲಿ ಭಾಗವಹಿಸಿದ 24 ಜಿಲ್ಲೆಗಳ ಆಯುಕ್ತರು ಮತ್ತು ಕಾರ್ಯದರ್ಶಿಗಳು ತಮ್ಮ ಜಿಲ್ಲೆಯ ಬಗ್ಗೆ. ಜಿಲ್ಲಾ ತರಬೇತಿ ಕೇಂದ್ರಗಳ ಅಭಿವೃದ್ದಿಯ ಬಗ್ಗೆ ವರದಿ ಮತ್ತು ಅಭಿಪ್ರಾಯವನ್ನು ಮಂಡಿಸಿದರು. ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್) ಮತ್ತು (ಗೈಡ್), ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ ಮತ್ತು ಗೈಡ್ಸ್) ತಮ್ಮ ವಿಭಾಗಕ್ಕೆ ಸಂಬಂದಿಸಿದಂತೆ ಅಭಿಪ್ರಾಯಗಳನ್ನು ಸಭೆಯ ಮುಂದೆ ತಿಳಿಸಿದರು.

ಶ್ರೀ ಪಿಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಮಾತನಾಡುತ್ತಾ ಆಗಮಿಸಿದ ಜಿಲ್ಲೆಗಳ ಎಲ್ಲಾ ಕಾರ್ಯದರ್ಶಿಗಳನ್ನು ಮತ್ತು ಆಯುಕ್ತರುಗಳನ್ನು ಅಭಿನಂದಿಸಿ, ಗಣತಿ ಪೂರೈಸಲು, ತರಬೇತಿ ಶಿಬಿರಗಳನ್ನು ಜಿಲ್ಲಾ ಮಟ್ಟಗಳಲ್ಲಿ ನಡೆಸಲು ರಾಜ್ಯ ಸಂಸ್ಥೆಯ ವತಿಯಿಂದ ಜಿಲ್ಲೆಗಳಿಗೆ ನೀಡಿರುವ ಎಲ್ಲಾ ಕಾರ್ಯಕ್ರಮಗಳನ್ನು ಸಂಪೂರ್ಣವಾಗಿ ಯಶಸ್ವಿಗೊಳಿಸಲು ಹಾಗೂ ಜಿಲ್ಲೆಯ ಸರ್ವಾಂಗೀಣ ಅಭಿವೃದ್ದಿಗಾಗಿ ಜಿಲ್ಲಾ ಆಯುಕ್ತರು ಮತ್ತು ಕಾರ್ಯದರ್ಶಿಗಳು ಗಮನಾರ್ಹ ಕೊಡುಗೆ ನೀಡಲು ಕರೆ ನೀಡಿದರು.

ರಾಜ್ಯ ಸಂಸ್ಥೆಯ ಉಪಾದ್ಯಕ್ಷರಾದ ಶ್ರೀ ಟಿ.ಎಸ್. ಲೂಕಾಸ್, ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಶ್ರೀಮತಿ ಸರೋಜ. ವಿ. ನಾಯ್ಡು ಹಾಗೂ ಸಹಾಯಕ ರಾಜ್ಯ ಆಯುಕ್ತರುಗಳು, ರಾಜ್ಯ ಕೇಂದ್ರ ಸ್ಥಾನಿಕ ಆಯುಕ್ತರುಗಳು ಸಭೆಯಲ್ಲಿ ಉಪಸ್ಥಿತರಿದ್ದರು.

ಶ್ರೀ ಸಿ.ಎಸ್. ರೆಡ್ಡಿ ರಾಜ್ಯ ಜಂಟಿ ಕಾರ್ಯದರ್ಶಿ(ಸ್ಕೌಟ್ಸ್) ಸರ್ವರನ್ನು ಸ್ವಾಗತಿಸಿದರು, ಶ್ರೀಮತಿ ಎಸ್.ಕೆ.ಪ್ರಭ ರಾಜ್ಯ ಜಂಟಿ ಕಾರ್ಯದರ್ಶಿ (ಗೈಡ್) ಸಭೆಯಲ್ಲಿ ಪ್ರಾಸ್ತಾವಿಕ ನುಡಿಗಳನ್ನು ನುಡಿದರು. ಶ್ರೀ ಎಂ. ಖಾಲಿದ್ ರಾಜ್ಯ ಆಯುಕ್ತರು (ಸ್ಕೌಟ್) ಮತ್ತು ಶ್ರೀಮತಿ ಗೀತಾ ನಟರಾಜ್ ರಾಜ್ಯ ಆಯುಕ್ತರು (ಗೈಡ್ಸ್) ಉಪಸ್ಥಿತರಿದ್ದು ಸಲಹೆ ಸೂಚನೆಗಳನ್ನು ನೀಡಿದರು. ಶ್ರೀಮತಿ ಕೆ.ವಿ. ಶ್ಯಾಮಲ ರಾಜ್ಯ ತರಬೇತಿ ಆಯುಕ್ತರು (ಗೈಡ್ಸ್) ವಂದನೆ ಸಲ್ಲಿಸಿದರು.

## ಮಡಿಕೇರಿಯಲ್ಲಿ
## ಫೀಲ್ಡ್‌ಮಾರ್ಷಲ್ ಕೆ.ಎಂ ಕಾರಿಯಪ್ಪ ಅವರ ಜನ್ಮದಿನಾಚರಣೆ

ದಿನಾಂಕ 28 ಜನವರಿ 2016 ರಂದು ಕೊಡಗು ಜಿಲ್ಲೆಯ ಮಡಿಕೇರಿಯಲ್ಲಿ ಕರ್ನಾಟಕ ಸರ್ಕಾರದ ಆಶ್ರಯದಲ್ಲಿ ಜರುಗುವ ಫೀಲ್ಡ್‌ಮಾರ್ಷಲ್ ಕೆ.ಎಂ ಕಾರಿಯಪ್ಪ ಅವರ ಹುಟ್ಟು ಹಬ್ಬದ ಕಾರ್ಯಕ್ರಮದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಜ್ಯ ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸುವರು.

# ಜಿಲ್ಲಾ ವಾರ್ತೆಗಳು

## ಬಳ್ಳಾರಿ

ದಿನಾಂಕ 16-11-2015 ರಿಂದ 22-11-2015 ರ ವರೆಗೆ ಜಿಲ್ಲಾ ಮಟ್ಟದ ಮೂಲ ತರಬೇತಿ ಶಿಬಿರವನ್ನು ಸೈನಿಕ ತರಬೇತಿ ಕೇಂದ್ರ ತೋರಣಗಲ್ಲಿನಲ್ಲಿ ಆಯೋಜಿಸಲಾಗಿತ್ತು.

ಈ ಶಿಬಿರದಲ್ಲಿ 70 ಸ್ಕೌಟ್ಸ್ ಮಾಸ್ಟರ್ಸ್, 21 ಕಬ್ ಮಾಸ್ಟರ್ಸ್ ಮತ್ತು 42 ಗೈಡ್ಸ್ ಕ್ಯಾಪ್ಟನ್‌ಗಳು ಭಾಗವಹಿಸಿದ್ದರು. ಮೂಲ ತರಬೇತಿ ಶಿಬಿರದ ಮುಕ್ತಾಯ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾ ರವರು "ಪ್ರತಿಯೊಂದು ಶಾಲೆಯಲ್ಲಿ ದಳಗಳನ್ನು ಪ್ರಾರಂಭಿಸಿ ಮಕ್ಕಳನ್ನು ಉತ್ತಮ ಪ್ರಜೆಗಳನ್ನಾಗಿ ರೂಪಿಸುವಲ್ಲಿ ಸ್ಕೌಟ್ಸ್ ಮಾಸ್ಟರ್ಸ್‌ಗಳ ಪಾತ್ರ ಬಹು ಮಹತ್ವದ್ದು" ಎಂದು ನುಡಿದರು.

ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ರಾಜ್ಯ ಮತ್ತು ರಾಷ್ಟ್ರ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ನವರು ಮಾತನಾಡಿ "ಬಳ್ಳಾರಿ ಜಿಲ್ಲೆಯ 40 ವರ್ಷಗಳ ಇತಿಹಾಸಲ್ಲಿ 133 ಶಿಕ್ಷಕರು ತರಬೇತಿಗೆ ಆಗಮಿಸಿರುವುದು ದಾಖಲೆಯೇ ಸರಿ" ಎಂದರು. ಈ ಸಂದರ್ಭದಲ್ಲಿ ಬಳ್ಳಾರಿ ಜಿಲ್ಲಾ ಸಂಸ್ಥೆಯ ಖಜಾಂಚಿಗಳಾದ ಶ್ರೀ ಪ್ರಭಾಕರ್ ರವರು ಉಪಸ್ಥಿತರಿದ್ದರು.

ಸ್ವಾಗತವನ್ನು ಶ್ರೀ ಎಮ್. ನಾಗರಾಜ್, ಡಿ.ಟಿ.ಸಿ. (ಎಸ್.) ಮಾಡಿದರು. ನಿರೂಪಣೆಯನ್ನು ಶ್ರೀಮತಿ ಜಯಶ್ರೀ ಜೋಷಿ, ಡಿ.ಟಿ.ಸಿ. (ಎಲ್.ಟಿ.ಫ್ಲಾಕ್) ಅವರು ಮಾಡಿದರು. ಶ್ರೀಮತಿ ಮಲ್ಲೇಶ್ವರಿ ಜೂಜಾರೆ ಜಿಲ್ಲಾ ಸಂಘಟಕರು, ಬಳ್ಳಾರಿ ಅವರು ವಂದನಾರ್ಪಣೆ ಮಾಡಿದರು. ಶಿಬಿರದ ವರದಿಯನ್ನು ಕಬ್ ವಿಭಾಗದಿಂದ ಶ್ರೀ ಬೊಮ್ಮ ನಾಯಕ್ ಹಾಗೂ ಸ್ಕೌಟ್ಸ್-ಗೈಡ್ಸ್ ವಿಭಾಗದಿಂದ ಶ್ರೀ ಮಂಜುನಾಥಪ್ಪನವರು ಮಂಡಿಸಿದರು.

ಕಬ್ ವಿಭಾಗದ ನಾಯಕರಾಗಿ ಶ್ರೀ ಬೊಮ್ಮನಾಯಕ್, ಸ್ಕೌಟ್ ವಿಭಾಗದ ನಾಯಕರಾಗಿ ಶ್ರೀ ಪಿ. ಮಂಜುನಾಥಪ್ಪ ಮತ್ತು ಶ್ರೀ ಎಮ್. ನಾಗರಾಜ್, ಎ.ಎಲ್.ಟಿ.(ಎಸ್.) ಗೈಡ್ ವಿಭಾಗದ ನಾಯಕಿಯಾಗಿ ಶ್ರೀಮತಿ ಮಲ್ಲೇಶ್ವರಿ ಜೂಜಾರೆ ಎ.ಎಲ್.ಟಿ. (ಗೈಡ್) ಇವರು ಕಾರ್ಯನಿರ್ವಹಿಸಿದರು.

## ಬೆಂಗಳೂರು ದಕ್ಷಿಣ

ದಿನಾಂಕ 01-12-2015 ರಿಂದ 07-12-2015 ರ ವರೆಗೆ ಬೆಂಗಳೂರು ದಕ್ಷಿಣ ಜಿಲ್ಲೆಯ ಆನೇಕಲ್ ತಾಲ್ಲೂಕು ಸ್ಥಳೀಯ ಸಂಸ್ಥೆಯ ವತಿಯಿಂದ ತಮ್ಮನಾಯಕನಹಳ್ಳಿಯ ಹಸಿರುವ್ಯಾಲಿಯಲ್ಲಿ ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್ ಮೂಲ ತರಬೇತಿ ಶಿಬಿರಗಳನ್ನು ಏರ್ಪಡಿಸಲಾಗಿತ್ತು.

ಸ್ಕೌಟ್ ಮಾಸ್ಟರ್ ತರಬೇತಿಗೆ ರಾಜ್ಯ ಜಂಟಿ ಕಾರ್ಯದರ್ಶಿಗಳಾದ ಶ್ರೀ ಚಿನ್ನಸ್ವಾಮಿ ರೆಡ್ಡಿ ಹಾಗು ಗೈಡ್ ಕ್ಯಾಪ್ಟನ್ ತರಬೇತಿಗೆ ಕೋಲಾರದ ಶ್ರೀಮತಿ ಉಮಾದೇವಿ ನಾಯಕರಾಗಿ ಕಾರ್ಯ ನಿರ್ವಹಿಸಿದರು. ಸಹಾಯಕರಾಗಿ ಎ.ಎಸ್.ಓ.ಸಿ. ಶ್ರೀ ಎಸ್. ಓಮೇಶ್ವರಯ್ಯ, ಶ್ರೀ ಸಿ. ಲಕ್ಷ್ಮೀಕಾಂತರಾಜು, ಶ್ರೀಮತಿ ಆರ್. ಸುಮಾ, ಶ್ರೀಮತಿ ಕೆ.ವಿ. ವಸಂತಮ್ಮ ಕಾರ್ಯನಿರ್ವಹಿಸಿದರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರಕುಮಾರ್ ಶಿಬಿರದ ನಿರ್ದೇಶಕರಾಗಿದ್ದರು.

ಸ್ಥಳೀಯ ಸಂಸ್ಥೆಗೆ ಸೀಮಿತವಾಗಿ ನಡೆಸಿದ ಈ ತರಬೇತಿಯಲ್ಲಿ ಸ್ಕೌಟ್ ಮಾಸ್ಟರ್ ತರಬೇತಿಯಲ್ಲಿ 20 ಹಾಗೂ ಗೈಡ್ ಕ್ಯಾಪ್ಟನ್ ತರಬೇತಿಯಲ್ಲಿ 11 ಮಂದಿ ಶಿಭಿರಾರ್ಥಿಗಳು ಭಾಗವಹಿಸಿ ತರಬೇತಿ ಪಡೆದರು.

ಸಮಾರೋಪ ಸಮಾರಂಭದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ಅಧ್ಯಕ್ಷತೆ ವಹಿಸಿ ಮಾತನಾಡುತ್ತಾ ಶಿಸ್ತು ಮತ್ತು ಸಂಯಮ ರೂಢಿಸಿಕೊಳ್ಳಲು ಸ್ಕೌಟ್ಸ್ ಮತ್ತು ಗೈಡ್ಸ್ ಅತ್ಯುತ್ತಮ ವೇದಿಕೆಯಾಗಿದೆ. ಸ್ಕೌಟ್ಸ್ ಮತ್ತು ಗೈಡ್ಸ್ ರಾಜಕೀಯೇತರ ಸಂಸ್ಥೆಯಾಗಿದ್ದು ಜಾತಿ, ಮತಗಳ ಮೀರಿದ ವೈಚಾರಿಕ ಪ್ರಜ್ಞೆ ಮೂಡಿಸುವಲ್ಲಿ ಇಲ್ಲಿಯ ಚಟುವಟಿಕೆಗಳು ಅತ್ಯಂತ ಉಪಯುಕ್ತವಾಗಿದೆ. ಇಂತಹ ಪವಿತ್ರ ಕಾರ್ಯವನ್ನು ಪ್ರಾಮಾಣಿಕವಾಗಿ ಮಾಡುವ ಮೂಲಕ ಶಿಕ್ಷಕರು ದೇಶಕ್ಕೆ ಕೊಡುಗೆ ನೀಡಬೇಕು ಎಂದರು.

ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಡಿ.ಆರ್. ರಾಮಮೂರ್ತಿ ಮಾತನಾಡಿ ತಾಲ್ಲೂಕಿನ ಎಲ್ಲಾ ಶಾಲೆಗಳಲ್ಲೂ ಸ್ಕೌಟ್ಸ್-ಗೈಡ್ಸ್ ಘಟಕಗಳನ್ನು ತೆರೆಯಬೇಕೆಂಬ ಉದ್ದೇಶದಿಂದ ತಾಲ್ಲೂಕಿನ ಶಿಕ್ಷಕರಿಗಾಗಿಯೇ ವಿಶೇಷ ಶಿಬಿರವನ್ನು ಆಯೋಜಿಸುವ ಮೂಲಕ ಸ್ಕೌಟ್‌ನ ಮೂಲ ತರಬೇತಿಗಾಗಿ ಶಿಕ್ಷಕರನ್ನು ನಿಯೋಜಿಸಲಾಗಿದೆ. ಈ ತರಬೇತಿಯ ಫಲಿತಾಂಶವೆಂದರೆ ಶಾಲೆಗಳಲ್ಲಿ ಸ್ಕೌಟ್ಸ್ ಘಟಕಗಳು ಹೆಚ್ಚಾಗಬೇಕು ಎಂದುರು.

ರಾಜ್ಯ ತರಬೇತಿ ಆಯುಕ್ತ ಶ್ರೀ ಎಲ್.ಟಿ. ಲೋಕೇಶ್, ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ಎಸ್. ಸತೀಶ್, ಸಹಾಯಕ ಜಿಲ್ಲಾ ಆಯುಕ್ತ ಶ್ರೀ ಮುನಿಸ್ವಾಮಿರೆಡ್ಡಿ, ನಿವೃತ್ತ ಮುಖ್ಯೋಪಾಧ್ಯಾಯ ಶ್ರೀ ವಿ.ಎಸ್. ಶ್ರೀನಿವಾಸಮೂರ್ತಿ, ಹಸಿರು ವ್ಯಾಲಿಯ ವ್ಯವಸ್ಥಾಪಕ ನಿರ್ದೇಶಕ ಶ್ರೀ ಡಿ. ಶ್ರೀನಿವಾಸ್, ಶ್ರೀಮತಿ ಅಲುಮೇಲಮ್ಮ, ಸರ್ಕಾರಿ ನೌಕರರ ಸಂಘದ ಅಧ್ಯಕ್ಷ ಶ್ರೀ ವಿ.ಕೆ. ಗವಿರಂಗಯ್ಯ, ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಅಧ್ಯಕ್ಷ ಶ್ರೀ ಕೆ. ಶಿವಣ್ಣ, ಕ್ಷೇತ್ರ ಸಮನ್ವಯಾಧಿಕಾರಿ ಶ್ರೀ ಮುನಿವೆಂಕಟರಾಮಾಚಾರಿ, ದೈಹಿಕ ಶಿಕ್ಷಣ ಪರಿವೀಕ್ಷಕ ಶ್ರೀ ಯಲ್ಲಪ್ಪ, ಶಿಕ್ಷಣ ಸಂಯೋಜಕರಾದ ಶ್ರೀ ವಿ. ಪ್ರಕಾಶ್, ಶ್ರೀ ಅಮೀರ್, ಜಾನ್, ಶ್ರೀ ಸುರೇಶ್ ಹಾಜರಿದ್ದರು.

ಭಗತ್ ಸಿಂಗ್ ಓಪನ್ ರೋವರ್ ತಂಡ ಹಾಗೂ ರಾಣಿ ಚೆನ್ನಮ್ಮ ರೇಂಜರ್ ತಂಡಗಳ ರೋವರ್ ಮತ್ತು ರೇಂಜರ್‌ಗಳು ಶಿಬಿರದ ಯಶಸ್ಸಿಗೆ ಕೈ ಜೋಡಿಸಿದರು.

## ಬೆಳಗಾವಿ

ದಿನಾಂಕ 07-11-2015 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯಲ್ಲಿ ಸ್ಕೌಟ್ಸ್-ಗೈಡ್ಸ್ ಸಂಸ್ಥಾಪನಾ ದಿನಾಚರಣೆಯನ್ನು ಆಚರಿಸಲಾಯಿತು. ಸಂಸ್ಥಾಪನಾ ದಿನಾಚರಣೆ ಅಂಗವಾಗಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ಸೈಕಲ್ ಜಾಥಾವನ್ನು ಆಯೋಜಿಸಲಾಗಿತ್ತು. ಜಾಥಾಕ್ಕೆ ಟಿಳಕವಾಡಿ ನಗರ ಸೇವಕರಾದ ಶ್ರೀ ಪಂಡರಿ ಪರಬ್, ಸಿ.ಪಿ.ಐ., ಶ್ರೀ ಜಾಧವ್ ರವರು ಹಸಿರು ನಿಶಾನೆ ತೋರಿದರು. ಜಾಥಾದಲ್ಲಿ ಶ್ರೀ ಎಸ್.ವೈ. ಹುಡೇದ, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಜಿ.ಬಿ. ಮನ್ನಿಕೇರಿ, ಜಿಲ್ಲಾ ಆಯುಕ್ತರು (ಸ್ಕೌಟ್ಸ್), ಶ್ರೀಮತಿ ಯು.ಬಿ. ಗಂಜೀಗಟ್ಟಿ, ಜಿಲ್ಲಾ ಆಯುಕ್ತರು (ಗೈಡ್), ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀ ಟಿ.ಡಿ. ಕಾಂಬೋಜಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಎಂ. ನದಾಫ, ಜಿಲ್ಲಾ ಸಂಘಟಕರುಗಳು ಹಾಗೂ ಸ್ಕೌಟರ್-ಗೈಡರ್‌ಗಳು ಭಾಗವಹಿಸಿದ್ದರು.

ಜಾಥಾ ನಂತರ ಜಿಲ್ಲಾ ಸ್ಕೌಟ್ ಭವನದಲ್ಲಿ ಜರುಗಿದ ಧ್ವಜಚೀಟಿಗಳ ಬಿಡುಗಡೆ ಸಮಾರಂಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರು, ಜಿಲ್ಲಾ ಆಯುಕ್ತರು ಸ್ಕೌಟ್,ಗೈಡ್, ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರು ಜಿಲ್ಲಾ ಕಾರ್ಯದರ್ಶಿಗಳು, ಜಿಲ್ಲಾ ಸಂಘಟಕರುಗಳು ಭಾಗವಹಿಸಿದ್ದರು. ಸದರಿ ಸೈಕಲ್ ಜಾಥಾದಲ್ಲಿ 200ಕ್ಕೂ ಹೆಚ್ಚು ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು.

## ಚಾಮರಾಜನಗರ

ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರು ದಿನಾಂಕ 03-11-2015 ರಂದು ಜಿಲ್ಲಾ ಸಂಸ್ಥೆಗೆ ಭೇಟಿನೀಡಿ ಜಿಲ್ಲಾ ಪ್ರಗತಿ, ಡಿ.ಓ.ಸಿ. ಗಳ ನಿಯೋಜನೆ ಬಗ್ಗೆ ಕರ್ನಾಟಕ ದರ್ಶನ ಅನುದಾನ ತರಬೇತಿ, ಬಗ್ಗೆ ವಿಚಾರಿಸಿ ಸೂಕ್ತಮಾರ್ಗದರ್ಶನ ನೀಡಿದರು. ಶ್ರೀ ಜಿ.ಆರ್. ಅಶ್ವಥ್ ನಾರಾಯಣ್, ಡಿ.ಸಿ.ಸಿ. ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಹಾಜರಿದ್ದರು.

* ದಿನಾಂಕ 07-11-2015 ರಂದು ಜಿಲ್ಲಾ ಕಛೇರಿಯಲ್ಲಿ ಧ್ವಜ ದಿನಾಚರಣೆ ಮತ್ತು ಸಪ್ತಾಹ ಕಾರ್ಯಕ್ರಮ ಜರುಗಿತು. ಶ್ರೀ ಹೆಚ್.ಸಿ. ನರಸಿಂಹಯ್ಯ ನವರು ಸ್ವಾಗತ ಭಾಷಣ ಮಾಡಿದರು. ಶ್ರೀ ಜಿ.ಆರ್. ಅಶ್ವಥ್‌ನಾರಾಯಣ್, ಡಿ.ಸಿ.ಸಿ. ಯವರು ಸಸಿಗೆ ನೀರೆರೆಯುವುದರ ಮೂಲಕ, ಶ್ರೀ ವಿ. ಮಲ್ಲಿಕಾರ್ಜುನಸ್ವಾಮಿ, ಡಿ.ಸಿ.(ಎಸ್) ರವರು ಜ್ಯೋತಿ ಬೆಳಗುವುದರ ಮೂಲಕ, ಶ್ರಿಮತಿ ಬರ್ನಾಡೇಟ್ ಲಿಸಿಸ್ ಡಿ.ಸಿ., (ಜಿ) ಧ್ವಜ ಚೀಟಿಯನ್ನು ಬಿಡುಗಡೆ ಮಾಡುವುದರ ಮುಲಕ ಸಪ್ತಾಹ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಶ್ರೀ ವಿ.ಎಂ. ರಾಮಚಂದ್ರ, ಜಿಲ್ಲಾ ಕಾರ್ಯದರ್ಶಿ ಧ್ವಜ ದಿನಾಚರಣೆ, ಸಪ್ತಾಹ ಕಾರ್ಯಕ್ರಮದ ಉದ್ದೇಶ, ಗುರಿ ತಿಳಿಯಪಡಿಸಿದರು. ಶ್ರೀಮತಿ ಪ್ಲೋರಿನಾ, ಜಿಲ್ಲಾ ಜಂಟಿ ಕಾರ್ಯದರ್ಶಿ ನಿರೂಪಿಸಿದರು.

* ಶ್ರೀ ಕೊಂಡಜ್ಜಿ ಬಸಪ್ಪ ಜನ್ಮಶತಮಾನೋತ್ಸವದ ಅಂಗವಾಗಿ ಸೇಂಟ್ ಜೋಸೆಫ್ ಹೈಯರ್ ಪ್ರೈಮರಿ ಶಾಲಾ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಂದ ಸೈಕಲ್ ಜಾಥಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಶ್ರೀ ವಿ. ಮಲ್ಲಿಕಾರ್ಜುನಸ್ವಾಮಿ ಡಿ.ಸಿ. (ಎಸ್) ರವರು ಉದ್ಘಾಟಿಸಿದರು. ಸ್ಕೌಟ್ ಸಪ್ತಾಹ ಕಾರ್ಯಕ್ರಮದಡಿಯಲ್ಲಿ ಚಾಮರಾಜನಗರ ಜಿಲ್ಲಾ ಪಂಚಾಯತಿ ಕಟ್ಟಡದ ಆವರಣ ಸುತ್ತಲೂ, ಹೂದೋಟದಲ್ಲಿರುವ ಕಸ-ಕಡ್ಡಿಗಳನ್ನು ಆಯ್ದು ಸ್ವಚ್ಛಗೊಳಿಲಾಯಿತು.

* ದಿನಾಂಕ 27-11-2015 ರಂದು ಜಿ.ಹೆಚ್.ಪಿ.ಎಸ್., ಹನೂರು ಶಾಲೆಯಲ್ಲಿ ವಲಯ ಸ್ಕೌಟರ್ಸ್-ಗೈಡರ್ಸ್ ಸಭೆ ಜರುಗಿತು. ಶ್ರಿ ವಿ.ಎಂ. ರಾಮಚಂದ್ರ, ಜಿಲ್ಲಾ ಕಾರ್ಯದರ್ಶಿ ಶ್ರೀಮತಿ ಕಮಲಮ್ಮ ಡಿ.ಓ.ಸಿ.,(ಗೈ) ರವರ ನೇತೃತ್ವದಲ್ಲಿ ವಲಯ ಸ್ಕೌಟರ್ಸ್-ಗೈಡರ್ಸ್ ಸಭೆ ಜರುಗಿತು.

## ಚಿಕ್ಕಮಗಳೂರು

ದಿನಾಂಕ 07-11-2015 ರಂದು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀಯುತ ಎಂ.ಎಸ್. ಷಡಕ್ಷರಿಯವರ ಅಧ್ಯಕ್ಷತೆಯಲ್ಲಿ ಸ್ಕೌಟ್-ಗೈಡ್ ಸಪ್ತಾಹದ ಉದ್ಘಾಟನಾ ಸಮಾರಂಭ ನಡೆಯಿತು. ಪೂರ್ವಭಾವಿಯಾಗಿ ಜನಸಾಮಾನ್ಯರಲ್ಲಿ ಪರಿಸರ ಪ್ರಜ್ಞೆ ಮೂಡಿಸುವ ಬಗ್ಗೆ ಸೈಕಲ್ ಜಾಥಾವನ್ನು ನಗರದ ಪ್ರಮುಖ ಬೀದಿಗಳಲ್ಲಿ ನಡೆಸಲಾಯಿತು. ಅದೇ ದಿನ ಸಮಾರಂಭದಲ್ಲಿ ಸ್ಕೌಟಿಂಗ್ ಗೈಡಿಂಗ್ ಧ್ವಜ ಚೀಟಿಗಳನ್ನು ಉಪ್ಪಳ್ಳಿ ಕೆನರಾ ಬ್ಯಾಂಕ್ ಮ್ಯಾನೇಜರ್ ರವರಾದ ಶ್ರೀ ಜಯಪ್ರಕಾಶ್ ರವರು ಬಿಡುಗಡೆ ಮಾಡಿದರು. ಶ್ರೀ ಕೊಂಡಜ್ಜಿ ಬಸಪ್ಪನವರ ಜನ್ಮಶತಾಬ್ಧಿ ಆಚರಣೆ ಪ್ರಯುಕ್ತ ಪ್ರಬಂಧ ಸ್ಪರ್ಧೆ, ಅಡುಗೆ ಮಾಡುವ ಸ್ಪರ್ಧೆ, ರಸಪ್ರಶ್ನೆ ಮುಂತಾದ ಕಾರ್ಯಕ್ರಮಗಳನ್ನು ನಡೆಸಲಾಯಿತು.

"ಶ್ರೀ ಕೊಂಡಜ್ಜಿ ಬಸಪ್ಪನವರ ಜೀವನ ಒಂದು ಸಂದೇಶ, ದೀರ್ಘಕಾಲ ಕರ್ನಾಟಕ ರಾಜ್ಯ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಮುಖ್ಯ ಆಯುಕ್ತರಾಗಿ ರಾಜ್ಯದಲ್ಲಿ ಸ್ಕೌಟ್-ಗೈಡ್ ಚಳುವಳಿಯು ಉತ್ತುಂಗಕ್ಕೇರಲು ಕಾರಣೀಭೂತರಾದ ಶ್ರೀ ಕೊಂಡಜ್ಜಿ ಬಸಪ್ಪನವರ ಸೌಜನ್ಯ, ಸರಳತೆ ಮತ್ತು ಸ್ನೇಹಮಯಿ ವ್ಯಕ್ತಿತ್ವವೇ ಕಾರಣ" ಎಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ಮುಖ್ಯ ಆಯುಕ್ತರಾದ ಶ್ರೀಎಂ.ಎಸ್. ಷಡಕ್ಷರಿಯವರು ತಿಳಿಸಿದರು. ಶ್ರೀಮತಿ ಅನಿತಾ ನಾಗೇಂದ್ರ, ಜಿಲ್ಲಾ ಕಾರ್ಯದರ್ಶಿ ಶ್ರೀ ಹೆಚ್.ಪಿ. ಶಶಿಧರರಾವ್ ಬಹುಮಾನ ವಿತರಿಸಿದರು. ಈ ಸಮಾರಂಭದಲ್ಲಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ನಂದಕುಮಾರ್, ಶ್ರೀ ನೀಲಕಂಠಚಾರ್, ಶ್ರೀ ಬಿ.ಎನ್. ಕಿರಣ್ ಕುಮಾರ್, ಜಿಲ್ಲಾ ಸಂಘಟಕರು, ಮತ್ತಿತರರು ಉಪಸ್ಥಿತರಿದ್ದರು. ನಗರದ ವಿವಿಧ ಶಾಲೆಗಳಿಂದ ಸುಮಾರು 200 ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ಚಿಕ್ಕಮಗಳೂರು ನಗರದ ಉಪ್ಪಳ್ಳಿ ಬಡಾವಣೆಯಲ್ಲಿರುವ ಮಾಡೆಲ್ ಇಂಗ್ಲೀಷ್ ಶಾಲೆಯಲ್ಲಿ ವ್ಯಾಸಂಗ ಮಾಡುವ ಪ್ರತಿಯೊಂದು ಮಗುವೂ ಸ್ಕೌಟ್-ಗೈಡ್ ಚಳುವಳಿಯ ಮೂಲ ಉದ್ದೀಶ್ಯವನ್ನು ಮತ್ತು ಧ್ಯೇಯೋದ್ದೇಶಗಳನ್ನು ಅರಿತು ತಮ್ಮ ಜೀವನದಲ್ಲಿ ಅವುಗಳನ್ನು ಅಳವಡಿಸಿಕೊಳ್ಳುವುದರ ಮೂಲಕ ರಾಷ್ಟ್ರ ಸೇವೆ ಮತ್ತು ವಿಶ್ವ ಭ್ರಾತೃತ್ವದ ರಾಯಭಾರಿಯಾಗಲಿ ಎನ್ನುವ ಉದ್ದೀಶ್ಯದಿಂದ ಸ್ಕೌಟಿಂಗ್ ಶಿಕ್ಷಣ ಅಳವಡಿಸಲಾಗಿದೆ. ಶಾಲೆಯಲ್ಲಿ 4 ಸ್ಕೌಟ್ ದಳಗಳು 4

ಗೈಡ್ ದಳಗಳು, 3 ಕಬ್ಸ್ ಹಾಗು 3 ಬುಲ್ ಬುಲ್ ಘಟಕಗಳಿರುವುದಲ್ಲದೆ, 2 ಬನ್ನಿಸ್ ಟಂಟೋಲಾಗಳು ಕೂಡಾ ಕಾರ್ಯ ನಿರ್ವಹಿಸುತ್ತಿವೆ. ಅಂದರೆ ಒಟ್ಟಾರೆ ಸುಮಾರು 500 ವಿದ್ಯಾರ್ಥಿಗಳು ಸಮವಸ್ತ್ರಧಾರಿಗಳಾಗಿದ್ದಾರೆ. ಅದಲ್ಲದೆ ಹೆಚ್ಚುಮಟ್ಟಿನ ಶಿಕ್ಷಕರು ತರಬೇತಿ ಹೊಂದಿದ್ದು. ಹಂತಹಂತವಾಗಿ ಎಲ್ಲರೂ ತರಬೇತಿ ಪಡೆಯುವ ವ್ಯವಸ್ಥೆಯಿದೆ. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎನ್. ಷಡಕ್ಷರಿಯವರು ಈ ಶಾಲೆಯ ಸಂಸ್ಥಾಪಕರಾಗಿದ್ದಾರೆ.

## ಚಿತ್ರದುರ್ಗ

ದಿನಾಂಕ 27-11-2015 ರಂದು ಚಿತ್ರದುರ್ಗ ತಾಲ್ಲೂಕಿನಲ್ಲಿ ನೂತನವಾಗಿ ನೊಂದಾವಣಿ ಮಾಡಿಸಿದ 120 ಶಿಕ್ಷಕ-ಶಿಕ್ಷಕಿಯರಿಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಣದ ಪರಿಚಯಾತ್ಮಕ ಶಿಬಿರವನ್ನು ಬಿ.ಇ.ಓ., ಶ್ರೀ ರವಿಶಂಕರ್ ರೆಡ್ಡಿ ಇವರು ಜ್ಯೋತಿ ಬೆಳಗಿಸುವುದರೊಂದಿಗೆ ಉದ್ಘಾಟಿಸಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಡಾ॥ ಎ. ಬಸಪ್ಪ, ಆಡಳಿತಾಧಿಕಾರಿಗಳು, ಮಹಾರಾಣಿ ಕಾಲೇಜ್, ಚಿತ್ರದುರ್ಗ ಇವರು ವಹಿಸಿದ್ದರು. ಈ ಸಂದರ್ಭದಲ್ಲಿ ಶ್ರೀ ಎಂ.ಹೆಚ್. ಜಯಣ್ಣ, ಪ್ರಭಾರಿ ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರು, ಚಿತ್ರದುರ್ಗ, ಶ್ರೀ ವೈ.ಬಿ.ಮಹೇಂದ್ರನಾಥ ಜಿಲ್ಲಾ ಸಹ ಕಾರ್ಯದರ್ಶಿಗಳು, ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಚಿತ್ರದುರ್ಗ, ಶ್ರೀಮತಿ ಸಿ.ಪಿ. ಸುಶೀಲಾ ಜಿಲ್ಲಾ ತರಬೇತಿ ಆಯುಕ್ತರು (ಗೈಡ್ಸ್), ಶ್ರೀ ಅನಿಲಾ, ಹೆಚ್.ಕ್ಯೂ.ಸಿ.(ಗೈಡ್ಸ್) ಶ್ರೀ ಪಿ.ವೈ. ದೇವರಾಜ್ ಪ್ರಸಾದ್, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಪ್ರಾಸ್ತಾವಿಕವಾಗಿ ಮಾತನಾಡಿದರು. ಶ್ರೀ ದಾದಾಪೀರ್ ಡಿಜಿಟಲ್ ವರ್ಲ್ಡ್ ಮಾಲೀಕರು. ಶ್ರೀ ಬಿ. ಚಂದ್ರಶೇಖರ್ ಸ್ಕೌಟ್ ಶಿಕ್ಷಕರು, ಶ್ರಿ ಎಂ. ವಿಶ್ವನಾಥ್ ಸ್ಕೌಟ್ ಶಿಕ್ಷಕರು ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಶ್ರೀ ನಾಗೇಶ್ ಆರ್. ಶಿವಪುರ ಎ.ಎಸ್.ಓ.ಸಿ. (ಸ್ಕೌಟ್ಸ್-ಗೈಡ್ಸ್) ತರಬೇತುದಾರರು ಚಿತ್ರದುರ್ಗ ಕರ್ತವ್ಯ ನಿರ್ವಹಿಸಿದರು.

* ದಿನಾಂಕ : 05-11-2015 ರಂದು ಶ್ರೀ ಕಬೀರಾನಂದ ಸ್ವಾಮೀಜಿ ಹಿ.ಪ್ರಾ. ಶಾಲೆ ಚಿತ್ರದುರ್ಗ ಇಲ್ಲಿ ಕಬ್-ಬುಲ್‌ಬುಲ್ಸ್ ಘಟಕಗಳ ಉದ್ಘಾಟನೆ ಸಮಾರಂಭ ಜರುಗಿತು. ಶ್ರೀ ನಿರಂಜನ ಪ್ರಾಚಾರ್ಯರು, ಶ್ರೀ ಸದ್ಗುರು ಕಬೀರಾನಂದ ಸ್ವಾಮಿ ದೈಹಿಕ ಶಿಕ್ಷಣ ಕಾಲೇಜು, ಚಿತ್ರದುರ್ಗರವರು ಜ್ಯೋತಿ ಬೆಳಗಿಸಿದರು. ಶ್ರೀ ವೈ.ಬಿ. ಮಹೇಂದ್ರನಾಥ, ಜಿಲ್ಲಾ ಸಹ ಕಾರ್ಯದರ್ಶಿಗಳು, ಶ್ರೀ ಪಿ.ವೈ. ದೇವರಾಜ್ ಪ್ರಸಾದ್, ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳು, ಶ್ರೀಮತಿ ಅನಿಲಾ ಜಿಲ್ಲಾ ಸ್ಥಾನಿಕ ಗೈಡ್ಸ್ ಆಯುಕ್ತರು, ಶ್ರೀಮತಿ ಕೆ.ಎಲ್. ನಾಗಲತಾ, ಶ್ರೀ ನಾಗೇಶ್ ಆರ್. ಶಿವಪುರ ಸಹಾಯಕ ರಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಚಿತ್ರದುರ್ಗ ಭಾಗವಹಿಸಿದರು.

* ದಿ॥ ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವ ಪ್ರಯುಕ್ತ ದಿನಾಂಕ 12-12-2015 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಭವನ, ಚಿತ್ರದುರ್ಗ ಇಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ, ಚಿತ್ರದುರ್ಗ, ರೋಟರಿ ಕ್ಲಬ್, ವಿಂಡ್‌ಮಿಲ್ ಸಿಟಿ, ಇಂಡಿಯನ್ ರೆಡ್‌ಕ್ರಾಸ್ ಸಂಸ್ಥೆ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳ ಇಲಾಖೆ, ಜಿಲ್ಲಾ ಅಂಧತ್ವ ನಿಯಂತ್ರಣಾ ಸಂಸ್ಥೆ, ತಾಲ್ಲೂಕು ಆರೋಗ್ಯಾಧಿಕಾರಿಗಳು, ಚಿತ್ರದುರ್ಗ ಇವರೆಲ್ಲರ ಸಹಕಾರದೊಂದಿಗೆ "ಉಚಿತ ನೇತ್ರ ತಪಾಸಣೆ ಮತ್ತು ಶಸ್ತ್ರ ಚಿಕಿತ್ಸಾ ಶಿಬಿರ" ಕಾರ್ಯಕ್ರಮ ಜರುಗಿತು. ಜಿಲ್ಲೆಯ ನಾನಾ ಭಾಗಗಳಿಂದ ಹಾಗೂ ಚಿತ್ರದುರ್ಗ ನಗರದ 500ಕ್ಕೂ ಹೆಚ್ಚು ಫಲಾನುಭವಿಗಳು ಚಿಕಿತ್ಸೆಗಾಗಿ ಆಗಮಿಸಿದ್ದರು ಈ ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಎಂ. ರೇವಣಸಿದ್ಧಪ್ಪ, ಡಿ.ಡಿ.ಪಿ.ಐ., ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗು ಜಿಲ್ಲಾ ಮುಖ್ಯ ಆಯುಕ್ತರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಚಿತ್ರದುರ್ಗ ಇವರು ಸಸಿಗೆ ನೀರು ಹಾಕುವದರೊಂದಿಗೆ ನೆರವೇರಿಸಿದರು.

ಖ್ಯಾತ ನೇತ್ರ ತಜ್ಞರಾದ ಡಾ॥ ಕೆ. ನಾಗರಾಜ್ ಕೊಂಡ್ಲಹಳ್ಳಿಯವರು ಕಣ್ಣು ಮಾನವನ ಅತ್ಯಮೂಲ್ಯ ಅಂಗ. ಉಚಿತ ತಪಾಸಣೆ, ಶಸ್ತ್ರ ಚಿಕಿತ್ಸೆ ಇರುವುದರಿಂದ, ಇದರ ಲಾಭವನ್ನು ಎಲ್ಲರೂ ಪಡೆಯಿರಿ ಮತ್ತು ಈ ಕಾರ್ಯಕ್ರಮವನ್ನು ಸಂಘಟಿಸಿರುವ ಸಂಘಟನೆಗಳಿಗೆ ಧನ್ಯವಾದಗಳನ್ನು ಹೇಳಿರಿ ಎಂದು ಪ್ರಾಸ್ತಾವಿಕ ನುಡಿ ನುಡಿದರು.

ಈ ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಾದ ಶ್ರೀ ಪಿ.ಎಲ್. ಸುರೇಶ್ ರಾಜ್, ಜಿಲ್ಲಾ ಆಯುಕ್ತರು, ಶ್ರೀಮತಿ ಜಯಶೀಲಾ ಮಹೇಶ್ವರಪ್ಪ, ಜಿಲ್ಲಾ ಗೈಡ್ಸ್ ಆಯುಕ್ತರು, ಶ್ರೀಮತಿ ರೀನಾ ವೀರಭದ್ರಪ್ಪ ಜಿಲ್ಲಾ ಜಂಟಿ ಕಾರ್ಯದರ್ಶಿಗಳು, ಶ್ರೀಮತಿ ಸಿ.ಪಿ. ಸುಶೀಲಾ ಜಿಲ್ಲಾ ತರಬೇತಿ ಆಯುಕ್ತರು (ಗೈಡ್ಸ್) ರವರು, ಶ್ರೀ ಅನ್ವರ್ ಪಾಷಾ ಜಿಲ್ಲಾ ಖಜಾಂಚಿರವರು. ಶ್ರೀ ಮೊಹಮ್ಮದ್ ಮೊಹಿನುದ್ದೀನ್ ಎಡಿಸಿ (ಸ್ಕೌಟ್ಸ್) ಹಾಗೂ ರಾಜ್ಯ ಹಣಕಾಸು ಸಮಿತಿ ಸದಸ್ಯರು. ಶ್ರೀಮತಿ ನಿರ್ಮಲ ಬಸವರಾಜ್ ಎಡಿಸಿ (ಗೈಡ್ಸ್)ರವರು ಡಾ॥ ರಹಮತ್‌ವುಲ್ಲಾ ಎಡಿಸಿ (ಸ್ಕೌಟ್ಸ್)ರವರು, ರೆಡ್‌ಕ್ರಾಸ್ ಸಂಸ್ಥೆಯ ಪದಾಧಿಕಾರಿಗಳು, ರೋಟರಿ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಶ್ರೀ ಪಿ.ಎಲ್. ಸುರೇಶ್ ರಾಜ್ ರವರು ಎಲ್ಲರನ್ನೂ ಸ್ವಾಗತಿಸಿದರು. ವಿಂಡ್‌ಮಿಲ್ ಸಿಟಿ ಸಂಸ್ಥೆಯ ಅಧ್ಯಕ್ಷರಾದ ಶ್ರೀಮತಿ ಶೈಲಜಾ ರೆಡ್ಡಿಯವರು ವಂದಿಸಿದರು. ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಜಂಟಿ ಕಾರ್ಯದರ್ಶಿಯಾದ ಶ್ರೀಮತಿ ರೀನಾ ವೀರಭದ್ರಪ್ಪ ರವರು ಕಾರ್ಯಕ್ರಮ ನಿರೂಪಿಸಿದರು. ಶ್ರೀ ಬಿ.ಎ. ಲಿಂಗಾರೆಡ್ಡಿ ಜಿಲ್ಲಾ ಕಾರ್ಯದರ್ಶಿಗಳು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಚಿತ್ರದುರ್ಗ ರವರು ಈ ಕಾರ್ಯಕ್ರಮವನ್ನು ಸಂಘಟಿಸಿದ್ದರು.

## ದಕ್ಷಿಣ ಕನ್ನಡ

ದಿನಾಂಕ 07-11-2015 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥಾಪನಾ ದಿನಾಚರಣೆ ಹಾಗೂ ಧ್ವಜ ದಿನಾಚರಣೆಯನ್ನು ಲಾಲ್‌ಬಾಗ್, ಮಂಗಳೂರು ಇಲ್ಲಿ ಸಂಘಟಿಸಲಾಯಿತು.

ಶ್ರೀ ಯತೀಶ್ ಬೈಕಂಪಾಡಿ ಅಧ್ಯಕ್ಷರು, ರೋಟರಿ, ಮಂಗಳೂರು ಇವರು ಮುಖ್ಯ ಅತಿಥಿಯಾಗಿ ಧ್ವಜ ಸ್ಟಿಕ್ಕರ್ ಗಳನ್ನು ಬಿಡುಗಡೆಗೊಳಿಸಿದರು. ಶ್ರೀಮತಿ ಐರಿನ್ ಡಿ'ಕುನ್ಹ ಜಿಲ್ಲಾ ಆಯುಕ್ತರು (ಗೈಡ್ಸ್) ಮುಖ್ಯ ಅತಿಥಿಯಾಗಿ ಮಾತನಾಡಿದರು. ಶ್ರೀ ಎನ್.ಜಿ. ಮೋಹನ್ ಜಿಲ್ಲಾ ಮುಖ್ಯ ಆಯುಕ್ತರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ವಾಸುದೇವ ಬೋಳೂರು, ಜಿಲ್ಲಾ ಖಜಾಂಚಿ, ಶ್ರೀ ಕೃಷ್ಣಪ್ಪ ಸಮಾಜ ಸೇವಕರು ಇವರುಗಳು ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀ ಎಂ.ಜಿ. ಕಜೆ, ಜಿಲ್ಲಾ ಸಂಘಟನಾ ಆಯುಕ್ತರು (ಸ್ಕೌಟ್ಸ್) ಸ್ವಾಗತಿಸಿದರು. ಶ್ರಿಮತಿ ಚಂದ್ರಕಲಾ, ಜಿಲ್ಲಾ ಸಂಘಟಕರು (ಗೈಡ್ಸ್) ವಂದಿಸಿದರು. ಶ್ರೀ ಎಂ. ಪ್ರಭಾಕರ್ ಭಟ್ ಸಹಾಯಕ ರಾಜ್ಯ ಸಂಘಟನಾ ಆಯುಕ್ತರು ಕಾರ್ಯಕ್ರಮ ನಿರ್ವಹಿಸಿದರು. ಕೊಂಡಜ್ಜಿ ಬಸಪ್ಪ ಶತಮಾನೋತ್ಸವ ವರ್ಷಾಚರಣೆ ಹಾಗೂ ಧ್ವಜ ದಿನಾಚರಣೆ ಬಗ್ಗೆ ಸ್ಕೌಟ್ಸ್-ಗೈಡ್ಸ್ ವಿದ್ಯಾರ್ಥಿಗಳಿಂದ ಸೈಕಲ್ ಜಾಥಾ ಹಾಗೂ ನಗರ ಮೆರವಣಿಗೆ ಕಾರ್ಯಕ್ರಮ ಸಂಘಟಿಸಲಾಯಿತು. ಮಂಗಳೂರು ನಗರದ 200 ಸ್ಕೌಟ್ಸ್-ಗೈಡ್ಸ್‌ಗಳು, ಸ್ಕೌಟ್-ಗೈಡ್ ಶಿಕ್ಷಕರು ಭಾಗವಹಿಸಿದ್ದರು.

* ದಿನಾಂಕ 04-11-2015 ರಂದು ಮುಡಿಪು ಸ್ಥಳೀಯ ಸಂಸ್ಥೆಗೆ ಒಳಪಟ್ಟ ಸ್ಕೌಟ್, ಗೈಡ್, ಕಬ್ ಬುಲ್‌ಬುಲ್‌ಗಳಿಗೆ ಪಟಾಲಂ/ಷಟ್ಕ ನಾಯಕರ ತರಬೇತಿ ಶಿಬಿರವನ್ನು ಸೆಂಟ್ರಲ್ ಮುಸ್ಲಿಂ ಅನುದಾನಿತ ಹಿ.ಪ್ರಾ.ಶಾಲೆ ಮಲಾರ್ ಪದವು ಇಲ್ಲಿ ಕೊಂಡಜ್ಜಿ ಬಸಪ್ಪ ಶತಮಾನೋತ್ಸವ ವರ್ಷಾಚರಣೆ ಪ್ರಯುಕ್ತ ನಡೆಲಾಯಿತು. ಬೆಳಿಗ್ಗೆ ಧ್ವಜಾರೋಹಣ ನಡೆಸಿದ ನಂತರ ಉದ್ಘಾಟನಾ ಸಮಾರಂಭ ನಡೆಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ರಾಮರಾವ್ ಯಂ. ಇವರು ವಹಿಸಿದ್ದರು. ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ಹೆಚ್. ಎಮ್. ಮಹಮ್ಮದ್ ಮಲಾರ್ ಪದವುರವರು ಶಿಬಿರವನ್ನು ಉದ್ಘಾಟಿಸಿದರು. ಶಿಬಿರ ನಾಯಕಿ ಸಿಸ್ಟರ್ ಲೊರಿನ್ ಕುಟನ್ಹಾರವರು ವೇದಿಕೆಯಲ್ಲಿ ಉಪಸ್ಥಿತರಿದ್ದರು. ಕಾರ್ಯದರ್ಶಿ ಫೆಲಿಕ್ಸ್ ಡಿ'ಸೋಜ ರವರು ಸ್ವಾಗತಿಸಿದರು. ಅಧ್ಯಕ್ಷರು ಹಾಗು ಶಾಲಾ ಮುಖ್ಯೋಪಾಧ್ಯಾಯರು ಶಿಬಿರಕ್ಕೆ ಶುಭ ಕೋರಿದರು. ಸಹಕಾರ್ಯದರ್ಶಿ ಶ್ರೀಮತಿ ರಾಜೇಶ್ವರಿಯವರು ವಂದಿಸಿದರು. ಶ್ರೀ ಜೋನ್ ಎ ಫೆರ್ನಾಂಡೀಸ್ ರವರು ಕಾರ್ಯಕ್ರಮ ನಿರೂಪಿಸಿದರು. ಕಬ್ ವಿಭಾಗಕ್ಕೆ ಶ್ರೀ ರಾಮರಾವ್, ಬುಲ್‌ಬುಲ್ ವಿಭಾಗಕ್ಕೆ ಸಿಸ್ಟರ್ ಲೊರಿನ್ ಕುಟಿನ್ಹಾ. ಸ್ಕೌಟ್-ಗೈಡ್ ವಿಭಾಗಕ್ಕೆ ಜಿಲ್ಲಾ ಸಂಘಟನಾ ಆಯುಕ್ತೆ ಶ್ರೀಮತಿ ಚಂದ್ರಕಲಾರವರು ಶಿಬಿರ ನಾಯಕರಾಗಿ ತರಬೇತಿ ನೀಡಿದರು.

ಸಂಸ್ಥೆಯ ಅಧ್ಯಕ್ಷರಾದ ಶ್ರೀ ಸಂತೋಷ್ ಕುಮಾರ್ ರೈಯವರು ಹಾಗು ಅತಿಥೇಯ ಶಾಲೆಯ ಸಂಚಾಲಕರಾದ ಶ್ರೀಮತಿ ಮತ್ತು ಶ್ರೀ ಮಧುಸೂದನ್ ರವರು ಶಿಬಿರಕ್ಕೆ ಭೇಟಿ ನೀಡಿ ಮಕ್ಕಳಿಗೆ ಶುಭ ಕೋರಿದರು. ಸಂಜೆ ಸಮಾರೋಪ ಸಮಾರಂಭ ನಡೆಸಿ ಶಿಬಿರಾರ್ಥಿಗಳಿಗೆ ಪ್ರಮಾಣ ಪತ್ರ ವಿತರಿಸಲಾಯಿತು. ಈ ಶಿಬಿರದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಮತ್ತು ಶಿಕ್ಷಕರು ಸೇರಿ ಒಟ್ಟು 106 ಮಂದಿ ಭಾಗವಹಿಸಿದ್ದರು.

* ಜಿಲ್ಲಾ ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವು ಇತ್ತೀಚೆಗೆ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆಯ ಸ್ಕೌಟ್ಸ್ ಭವನದಲ್ಲಿ ನಡೆಯಿತು. ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎನ್.ಜಿ. ಮೋಹನ್ ವಹಿಸಿದ್ದರು. ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆ ರಾಜ್ಯದಲ್ಲಿಯೇ ಪ್ರಥಮ ಸ್ಥಾನದಲ್ಲಿದ್ದು ಮುಂದಿನ ದಿನಗಳಲ್ಲಿ ಸ್ಕೌಟ್ಸ್-ಗೈಡ್ಸ್ ದಳಗಳನ್ನು ಜಿಲ್ಲೆಯ ಎಲ್ಲಾ ಶಾಲೆ-ಕಾಲೇಜುಗಳಲ್ಲಿ ಪ್ರಾರಂಭಿಸುವ ಬಗ್ಗೆ ವಿವಿಧ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ ಎಂದು ತಿಳಿಸಿದರು.

ಉದ್ಘಾಟನೆಯನ್ನು ಖ್ಯಾತ ಯಕ್ಷಗಾನ ಕಲಾವಿದ ಶ್ರೀ ಜಬ್ಬರ್ ಸುಮೋ ನೆರವೇರಿಸಿ ಮಾತಿನ ಚಮತ್ಕಾರಗಳು ಹೇಗಿರಬೇಕು, ಒತ್ತಡವನ್ನು ನಿವಾರಿಸುವುದು ಹೇಗೆ ಹಾಗೂ ಜೀವನದ ನಿಲುಮೆಗಳು ಯಾವುದೆಂಬುದರ ಬಗ್ಗೆ ಮಾಹಿತಿಯನ್ನು ನೀಡಿದರು. ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ವೇದಿಕೆಯಲ್ಲಿ ಉಪಸ್ಥಿತರಿದ್ದರು. ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀ ರಾಮಶೇಷ ಶೆಟ್ಟಿ ಸ್ವಾಗತಿಸಿದರು. ಜಿಲ್ಲಾ ಆಯುಕ್ತರು (ಗೈಡ್ಸ್) ಶ್ರೀಮತಿ ಐರಿನ್ ಡಿ'ಕುನ್ಹ ಧನ್ಯವಾದ ನೀಡಿದರು. ಶ್ರೀ ಎಂ. ಪ್ರಭಾಕರ್ ಭಟ್ ಕಾರ್ಯಕ್ರಮ ನಿರ್ವಹಿಸಿದರು. ಸ್ಕೌಟಿಂಗ್‌ನ ಸೇವೆಯಲ್ಲಿ ನಿರತರಾದ ನಿವೃತ್ತ ಶಿಕ್ಷಕರಾದ ಶ್ರೀ ಜಯಂತ್ ನಾಯಕ್, ಪಾಣಿ ಮಂಗಳೂರು, ಶ್ರೀ ವೆಂಕಟ್ರಮಣ ಭಟ್, ನೆಲ್ಯಾಡಿ, ಶ್ರೀ ರವೀಂದ್ರ ಉಪ್ಪಿನಂಗಡಿ, ಶ್ರೀಮತಿ ನಾಗವೇಣಿ ಇವರನ್ನು ಸನ್ಮಾನಿಸಲಾಯಿತು. ಜಿಲ್ಲೆಯ ವಿವಿಧಾ ಶಾಲೆಗಳ 200 ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್ ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿದ್ದರು.

## ಧಾರವಾಡ

* ದಿನಾಂಕ 07-11-2015 ರಂದು ಸಂಸ್ಥಾಪನಾ ದಿನಾಚರಣೆಯ ದಿನವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎಂ. ಲೋಂಡೆ ಉದ್ಘಾಟಿಸಿ ಸೈಕಲ್ ಜಾಥಾಕ್ಕೆ ಚಾಲನೆ ನೀಡಿದರು. ಜಿಲ್ಲೆಯ ಅನೇಕ ಸ್ಕೌಟ್ಸ್-ಗೈಡ್ಸ್‌ಗಳು ಸೈಕಲ್ ಜಾಥಾದಲ್ಲಿ ಭಾಗವಹಿಸಿದ್ದರು.

* ದಿನಾಂಕ 15-11-2015 ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧಿಯಾರವರು ಭಾರತ್ ಸ್ಕೌಟ್ಸ್-ಗೈಡ್ಸ್, ಜಿಲ್ಲಾ ಸಂಸ್ಥೆ ಧಾರವಾಡಕ್ಕೆ ಭೇಟಿ ನೀಡಿ ಜಿಲ್ಲಾ ತರಬೇತಿ ಕೇಂದ್ರ "ಸಸ್ಯ ಚೇತನ" ದಡ್ಡಿಕಮಲಾಪೂರ ಇದರ ವೀಕ್ಷಣೆ ಮಾಡಿದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ, ಧಾರವಾಡ ಇದರ ಆಶ್ರಯದಲ್ಲಿ ದಿನಾಂಕ 17 ರಿಂದ 23-11-2015 ರ ವರೆಗೆ ಜಿಲ್ಲಾ ತರಬೇತಿ ಕೇಂದ್ರದಲ್ಲಿ ನಡೆದ ಸ್ಕೌಟ್ ಮಾಸ್ಟರ್ ಮೂಲ ತರಬೇತಿ ಶಿಬಿರದಲ್ಲಿ ಮಾರ್ಗದರ್ಶಕರಾಗಿ ಜಿಲ್ಲಾ ಮುಖ್ಯ ಆಯುಕ್ತರು ಆದ ಶ್ರೀ ಎಂ.ಎಂ. ಲೋಂಡೆ ಭಾಗವಹಿಸಿದರು. ಸಮಾರೋಪದಲ್ಲಿ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ವ್ಹಿ. ವ್ಹಿ. ಕಟ್ಟಿ ಮಾತನಾಡಿ ಎಲ್ಲರೂ ದಳ ಪ್ರಾರಂಭಿಸಿ ಸ್ಕೌಟ್ಸ್-ಗೈಡ್ಸ್‌ಗಳನ್ನು ಚಟುವಟಿಕೆಯಲ್ಲಿ ತೊಡಗಿಸುವಂತೆ ಹೇಳಿದರು. ಜಿಲ್ಲಾ ಸಹಕಾರ್ಯದರ್ಶಿಯಾದ ಶ್ರೀ ಎ.ವ್ಹಿ. ಶಿಂಧೆ ಭಾಗವಹಿಸಿದರು. ಶಿಬಿರದಲ್ಲಿ 15 ಶಿಕ್ಷಕರು ಭಾಗವಹಿಸಿ ತರಬೇತಿ ಪಡೆದರು. ಶಿಬಿರದ ನಾಯಕರಾಗಿ ಶ್ರೀ ಸಿ.ಎಂ. ಕೆಂಗಾರ ಕರ್ತವ್ಯ ನಿರ್ವಸಿದರು.

* ದಿನಾಂಕ 17-11-2015 ರಿಂದ 23-11-2015 ರ ವರೆಗೆ ನಡೆದ ಗೈಡ್ ಕ್ಯಾಪ್ಟನ್ ಮೂಲ ತರಬೇತಿಯು ಜಿಲ್ಲಾ ಸಂಸ್ಥೆಯ ಆವರಣದಲ್ಲಿ ನಡೆಯಿತು. ಮಾರ್ಗದರ್ಶಕರಾಗಿ ಜಿಲ್ಲಾ ಕಾರ್ಯದರ್ಶಿಯಾದ ಶ್ರೀಮತಿ ಪ್ರಭಾ ಲೋಂಡೆ ಭಾಗವಹಿಸಿದರು. ಸಮಾರೋಪದಲ್ಲಿ ವಿಷಯ ಪರಿವೀಕ್ಷಕರಾದ ಶ್ರೀ ಬಿ. ವ್ಹಾಯ್, ಭಜಂತ್ರಿ ಮಾತನಾಡಿ ಗೈಡ್

ಕ್ಯಾಪ್ಟನ್‌ರು ದಳ ಆರಂಬಿಸಿ ಜಿಲ್ಲಾ ಸಂಸ್ಥೆಯೊಂದಿಗೆ ನಿಕಟ ಸಂಬಂಧವನ್ನು ಇಟ್ಟುಕೊಂಡು ಯಶಸ್ವಿಯಾಗಿ ಭಾಗವಹಿಸಲು ಕರೆ ನೀಡಿದರು. ತರಬೇತಿಯಲ್ಲಿ 24 ಶಿಕ್ಷಕಿಯರು ಭಾಗವಹಿಸಿ ತರಬೇತಿ ಪಡೆದರು. ತರಬೇತಿ ನಾಯಕಿಯಾಗಿ ಶ್ರೀಮತಿ ಪಿ.ಸಿ. ಮಂಗಳೂರು, ಕರ್ತವ್ಯ ನಿರ್ವಹಿಸಿದರು..

* ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಧಾರವಾಡ ಇದರ ಆಶ್ರಯದಲ್ಲಿ ದಿನಾಂಕ 24 ರಿಂದ 30-11-2015 ರ ವರೆಗೆ ನಡೆದ ಫ್ಲಾಕ್ ಲೀಡರ್ ಮೂಲ ತರಬೇತಿಯ ಸಮಾರೋಪದಲ್ಲಿ ಜಿಲ್ಲಾ ಕಾರ್ಯದಶಿಯಾದ ಶ್ರೀಮತಿ ಪ್ರಭಾ ಲೋಂಡೆ ಭಾಗವಹಿಸಿ ದಳವನ್ನು ಪ್ರಾರಂಭಿಸಿ ಸ್ಕೌಟ್ಸ್-ಗೈಡ್ಸ್‌ಗಳು ಚಟುವಟಿಕೆಯಲ್ಲಿ ಭಾಗವಹಿಸಿ ಪ್ರಶಸ್ತಿ ಪಡೆಯಲು ಪ್ರೇರೇಪಿಸಬೇಕೆಂದು ತಿಳಿಸಿದರು. 16 ಶಿಕ್ಷಕಿಯರು ಫ್ಲಾಕ್ ಲೀಡರ್ ತರಬೇತಿ ಪಡೆದರು. ತರಬೇತಿ ನಾಯಕಿಯರಾಗಿ ಶ್ರೀಮತಿ ಎಸ್.ಸಿ. ನರವಟೆ ಕರ್ತವ್ಯ ನಿರ್ವಹಿಸಿದರು.

## ಗದಗ

ಸ್ಪರ್ಧಾತ್ಮ ಯುಗದಲ್ಲಿರುವ ಎಲ್ಲಾ ವಿದ್ಯಾರ್ಥಿಗಳು ಸ್ಪರ್ಧೆಯಲ್ಲಿ ಭಾಗವಹಿಸಿ ಗುರಿಯನ್ನು ಸಾಧಿಸುವ ಛಲವನ್ನು ಹೊಂದಬೇಕು ಎಂದು ಶ್ರೀ ಪಿ.ಎಮ್. ಬಂದಕ್ಕನವರ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ತಾಲೂಕಾ ಸಂಸ್ಥೆ ಗದಗ ಗ್ರಾಮೀಣದ ಕಾರ್ಯಾಧ್ಯಕ್ಷರು ಹೇಳಿದರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ತಾಲೂಕಾ ಸಂಸ್ಥೆ ಗದಗ ಗ್ರಾಮೀಣ ವತಿಯಿಂದ ಶ್ರೀ ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವದ ಪ್ರಯುಕ್ತ ಏರ್ಪಡಿಸಿದ್ದ ಸ್ಪರ್ಧೆಗಳ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿದರು.

ಕಾರ್ಯಕ್ರಮವನ್ನು ಉದ್ಘಾಟಿಸಿದ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಎನ್.ಸಿ. ಮುಕ್ಕಣ್ಣನವರ ಪ್ರತಿ ವಿದ್ಯಾರ್ಥಿಗಳಲ್ಲಿಯೂ ವಿಶಿಷ್ಟವಾದ ಪ್ರತಿಭೆ ಇರುತ್ತದೆ. ಇಂತಹ ಸ್ಪರ್ಧೆಗಳ ಮೂಲಕ ಆ ಪ್ರತಿಭೆ ಹೊರ ಹೊಮ್ಮಬೇಕು ಎಂದು ಹೇಳಿದರು. ಶ್ರೀ ಸಿ.ಎನ್. ತೋಟಪ್ಪನವರ ಜಿಲ್ಲಾ ತರಬೇತಿ ಆಯುಕ್ತರು ಉಪನ್ಯಾಸ ನೀಡುತ್ತಾ ಶ್ರೀ ಕೊಂಡಜ್ಜಿ ಬಸಪ್ಪನವರು ಸಾಮಾನ್ಯ ಕುಟುಂಬದಲ್ಲಿ ಜನಿಸಿ ವಿಶಿಷ್ಟ ಪ್ರತಿಭೆ ಮತ್ತು ಸಾಮಾಜಿಕ ಸೇವಾ ಮನೋಭಾವನೆಯಿಂದ ರಾಷ್ಟ್ರೀಯ ನಾಯಕರಾಗಿ ಬೆಳೆದರು. ಅಲ್ಲದೇ ಅವರು ಸ್ಕೌಟ್ಸ್-ಗೈಡ್ಸ್‌ಗೆ ಸಲ್ಲಿಸಿದ ಸೇವೆ ಶ್ಲಾಘನೀಯ ಎಂದು ಹೇಳಿದರು

ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಶ್ರೀ ವಿ.ಎಮ್ ಹಿರೇಮಠ, ಜಿಲ್ಲಾಧ್ಯಕ್ಷರು, ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ ಗದಗ ಮತ್ತು ಶ್ರೀ ಜಿ.ಹೆಚ್. ಪೂಜಾರ ಪ್ರಧಾನ ಕಾರ್ಯದರ್ಶಿಗಳು ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಗದಗ ಸಮಾರಂಭವನ್ನು ಉದ್ದೇಶಿಸಿ ಮಾತನಾಡಿದರು.

ಕಾರ್ಯಕ್ರಮದಲ್ಲಿ ಶ್ರಿ ಎನ್. ವಿ. ಕಿತ್ತೂರ ಮತ್ತು ಶ್ರಿ ಬಿ.ಎಚ್. ಚಿಂಚಲಿ, ಶ್ರೀಮತಿ ಆರ್ ಕೆ. ಹಳ್ಯಾಳ, ಸಂಸ್ಥೆಯ ನಿರ್ದೇಶಕರು ಶ್ರೀ ಎಮ್. ವಿ. ಬಸರಿಕಟ್ಟೀ, ಉಪಾಧ್ಯಕ್ಷರು, ಪ್ರಾ.ಶಾ.ಶಿ. ಸಂಘ, ಗದಗ ತಾಲೂಕಾ ಶ್ರೀ ಬಿ.ಬಿ. ಹಡಪದ. ಕಾರ್ಯದರ್ಶಿಗಳು, ಪ್ರಾ.ಶಾ.ಶಿ.ಸಂಘ, ಗದಗ ತಾಲೂಕಾ ಶ್ರೀ ವಿ.ಬಿ. ಪೋಲಿಸ್ ಪಾಟೀಲ ರಾಜ್ಯ ಪರಿಷತ್ ಸದಸ್ಯರು, ಎನ್.ಜಿ. ಶ್ರೀ ಜಿ.ಸ್. ಗೌಡರ ಸಹ ಕಾರ್ಯದರ್ಶಿಗಳು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಗದಗ ಶ್ರೀಮತಿ ಎ.ಜಿ. ಹೆರಕಲ್ ಕೋಶಾಧ್ಯಕ್ಷರು ಶ್ರೀಮತಿ ಎಫ್.ಎಮ್. ಅಣ್ಣೀಗೇರಿ, ಗೈಡರ್, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ತಾಲ್ಲೂಕು ಸಂಸ್ಥೆ, ಗದಗ ಗ್ರಾಮೀಣ ಇವರು ಉಪಸ್ಥಿತರಿದ್ದರು.

## ಹಾಸನ

ದಿನಾಂಕ 07-11-2015 ರಂದು ಭಾರತ್ ಸ್ಕೌಟ್ಸ್ - ಗೈಡ್ಸ್ ನ ಜಿಲ್ಲಾ ಭವನದಲ್ಲಿ ಏರ್ಪಡಿಸಿದ್ದ ಕೊಂಡಜ್ಜಿ ಬಸಪ್ಪ ಅವರ ಶತಮಾನೋತ್ಸವ ಹಾಗು ಸ್ಕೌಟ್ಸ್-ಗೈಡ್ಸ್ ನ ಸಂಸ್ಥಾಪನಾ ದಿನಾಚರಣೆಗೆ ಅಂಗವಾಗಿ ಏರ್ಪಡಿಸಿದ್ದ ಪಥಲನೆಗೆ ಜಿಲ್ಲೆಯ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿ ಶ್ರೀ ಗಣೇಶ್ ಭಟ್ ಹಸಿರು ನಿಶಾನೆ ತೋರಿ ಬಸಪ್ಪನವರ ಬದುಕು ನಮಗೆಲ್ಲರಿಗೂ ಆದರ್ಶ ವಾಗಿದ್ದು ಮಕ್ಕಳು ಚಿಕ್ಕ ವಯಸ್ಸಿನಿಂದಲೇ ಉದಾತ್ತ ಚಿಂತನೆ ತುಂಬಿಕೊಂಡು ಈ ದೇಶದ

ಉತ್ತಮ ನಾಗರಿಕರಾಗಬೇಕು ಎಂದರು. ಪಥಸಂಚಲನವು ಕೊಂಡಜ್ಜಿ ಬಸಪ್ಪವರ ಭಾವಚಿತ್ರದೊಂದಿಗೆ ನಗರದೆಲ್ಲೆಡೆ ಯಶಸ್ವಿಯಾಗಿ ಸಾಗಿತು. ಇದೆ ವೇಳೆ ಬಸಪ್ಪನವರ ಕುರಿತು ಪ್ರಬಂಧ ಸ್ಪರ್ಧೆ, ಭಾವಚಿತ್ರ ಸ್ಪರ್ಧೆ, ಗಾಯನ ಸ್ಪರ್ಧೆ ಏರ್ಪಡಿಸಲಾಗಿತ್ತು.

ಸಮಾರೋಪ ಸಮಾರಂಭದಲ್ಲಿ ಜಿಲ್ಲಾ ಪಂಚಾಯತ್ ಅಧ್ಯಕ್ಷೆ ಶ್ರೀಮತಿ ಹೇಮಾವತಿ ಮಂಜುನಾಥ್ ಭಾಗವಹಿಸಿ ಮಾತನಾಡಿ ಮಕ್ಕಳಿಗೆ ನಿಸರ್ಗದ ಬಗ್ಗೆ ಒಲವು ಮೂಡಿಸಲು ಸ್ಕೌಟ್ಸ್-ಗೈಡ್ಸ್ ಚಳುವಳಿಯು ಸಹಕಾರಿಯಾಗುತ್ತಿರುವುದರಿಂದ ಸ್ಕೌಟ್-ಗೈಡ್‌ಗಳು ಪರಿಸರದ ಬಗ್ಗೆ ಆಸಕ್ತಿ ಮತ್ತು ಪ್ರೀತಿ ಬೆಳೆಸಿಕೊಂಡು ಪರಿಸರ ಸಂರಕ್ಷಣೆಗೆ ಮುಂದಾಗುತ್ತಿರುವುದು ಶ್ಲಾಘನೀಯ ಎಂದು ತಿಳಿಸಿದರು.

ನಗರದ ಭಾರತ್ ಸ್ಕೌಟ್ಸ್ – ಗೈಡ್ಸ್‌ನ ಜಿಲ್ಲಾ ಭವನದಲ್ಲಿ ಏರ್ಪಡಿಸಿದ್ದ ಕೊಂಡಜ್ಜಿ ಬಸಪ್ಪ ಅವರ ಶತಮಾನೋತ್ಸವ ಹಾಗೂ ಸ್ಕೌಟ್ಸ್-ಗೈಡ್ಸ್‌ನ ಸಂಸ್ಥಾಪನಾ ದಿನಾಚರಣೆಯಲ್ಲಿ ಸ್ಕೌಟ್ಸ್ – ಗೈಡ್ಸ್‌ನ ಸ್ಟಾಂಪ್ ಬಿಡುಗಡೆಗೊಳಿಸಿ ಮಾತನಾಡಿ, ಮಕ್ಕಳಲ್ಲಿ ಸೇವೆ ತುಂಬುವಂತಹ, ಶಿಸ್ತು ಬೆಳೆಸುವಂತಹ ಶಿಕ್ಷಣ ಅತ್ಯಂತ ಅವಶ್ಯವಾಗಿದ್ದು, ಇದರಿಂದ ಮಕ್ಕಳ ಪ್ರಗತಿಗೆ ಸಹಕಾರಿಯಾಗುತ್ತದೆ ಎಂದರಲ್ಲದೆ ತಾವೂ ಕೂಡ ಸ್ಕೌಟ್-ಗೈಡ್‌ನ ಜಿಲ್ಲಾ ಸಹಾಯಕ ಆಯುಕ್ತರಾಗಿ ಸೇವೆ ಸಲ್ಲಿಸಿದ ದಿನಗಳನ್ನು ಸ್ಮರಿಸಿದರು. ಮಕ್ಕಳು ಕೈಲಾದ ಮಟ್ಟಿಗೆ ದೇಶಕ್ಕೆ ಮತ್ತು ನೆರೆ-ಹೊರೆಯವರಿಗೆ ಸೇವೆ ಸಲ್ಲಿಸುವ ಗುಣಗಳನ್ನು ಬೆಳೆಸಿಕೊಳ್ಳುವಂತೆ ಸಲಹೆ ನೀಡಿದರು.

ಸ್ಕೌಟ್ಸ್ ಆಯುಕ್ತ ಶ್ರೀ ಪ್ರಕಾಶ್ ಎಸ್. ಯಾಜಿ. ಮಾತನಾಡಿ, ಸ್ಕೌಟ್ಸ್-ಗೈಡ್ಸ್‌ಗಳಲ್ಲಿ ಮಾನವೀಯ ಮೌಲ್ಯಗಳು ವೃದ್ಧಿಯಾಗಬೇಕಾಗಿದೆ. ಮಕ್ಕಳು ಈ ದೇಶದ ಸಂಪತ್ತಾಗಿರುವುದರಿಂದ ಅವರನ್ನು ನಿಜವಾದ ಮೌಲ್ಯಗಳನ್ನು ಅವರಲ್ಲಿ ಬೆಳೆಸಬೇಕಾಗಿದೆ ಎಂದರು.

ಕಾರ್ಯಕ್ರಮದಲ್ಲಿ ಮುಖ್ಯ ಆಯುಕ್ತರಾದ ಡಾ. ವೈ.ಎಸ್. ವೀರಭದ್ರಪ್ಪ ಅಧ್ಯಕ್ಷೀಯ ನುಡಿಗಳನ್ನಾಡಿದರು. ಕೊಂಡಜ್ಜಿ ಬಸಪ್ಪನವರ ಶತಮಾನೋತ್ಸವ ಆಚರಣೆ ಮತ್ತು ಅದರ ಮಹತ್ವ ಕುರಿತು ಮಾತನಾಡುತ್ತಾ, ಅವರು ರಾಜ್ಯ ಮತ್ತು ಕೇಂದ್ರದಲ್ಲಿ ವಿವಿಧ ಖಾತೆಗಳನ್ನು ನಿರ್ವಹಿಸಿದರಲ್ಲದೇ ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್ ಸಂಸ್ಥೆಯ ಬೆಳವಣಿಗೆಗೆ ಅವಿರತ ಶ್ರಮಿಸಿದರು ಎಂದು ಹೇಳಿದರು. ಇದೇ ಸಂದರ್ಭದಲ್ಲಿ ಕೊಂಡಜ್ಜಿ ಬಸಪ್ಪನವರ ಕುರಿತು ವಿವಿಧ ಸ್ಪರ್ಧೆ ವಿಜೇತ ಮಕ್ಕಳಿಗೆ ಬಹುಮಾನ ವಿತರಿಸಲಾಯಿತು.

* ಅರಸೀಕೆರೆ ಸ್ಥಳೀಯ ಸಂಸ್ಥೆ ಮತ್ತು ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬಾಣಾವರ ಇವರ ಸಹಯೋಗದೊಂದಿಗೆ ದಿನಾಂಕ 07-11-2015 ರಿಂದ 10-11-2015 ರ ವರೆಗೆ ಪದವಿ ಪೂರ್ವ ಮತ್ತು ಪ್ರಥಮ ದರ್ಜೆ ಕಾಲೇಜಿನ ರೋವರ್ಸ್ ವಿಭಾಗಕ್ಕೆ "ಪದಕ ತರಬೇತಿ ಶಿಬಿರವನ್ನು" ವ್ಯವಸ್ಥೆಗೊಳಿಸಲಾಗಿತ್ತು.

4 ದಿನಗಳ ಕಾಲ ನಡೆದ ಈ ತರಬೇತಿ ಶಿಬಿರದಲ್ಲಿ ವಿಶ್ವ ಸ್ಕೌಟಿಂಗ್-ಗೈಡಿಂಗ್, ರೋವರಿಂಗ್-ರೇಂಜರಿಂಗ್ ಬೆಳೆದು ಬಂದ ಇತಿಹಾಸ, ಸ್ಕೌಟ್‌ನ ನಿಯಮ ಮತ್ತು ಪ್ರತಿಜ್ಞೆ, ಸಮವಸ್ತ್ರದ ಪರಿಚಯ, ಭಾರತ್ ಸ್ಕೌಟ್ಸ್-ಗೈಡ್ಸ್ ಧ್ವಜ, ವಿಶ್ವ ಸ್ಕೌಟ್ ಧ್ವಜ, ಪ್ಯಾಟ್ರೋಲ್ ಪದ್ಧತಿ, ಬೇಡನ್ ಪೊವೆಲ್‌ರ ಆರು ವಿದಧ ವ್ಯಾಯಾಮಗಳು, ವನ ವಿದ್ಯಾ ಸಂಕೇತಗಳು, ವಿವಿಧ ರೀತಿಯ ಗಂಟುಗಳು ಮತ್ತು ಕಟ್ಟುಗಳನ್ನು ಪರಿಚಯಿಸಲಾಯಿತು.

ಶಿಬಿರದ ಮೂರನೇ ದಿನ ಸಮೀಪದ ಹೇಮಗಿರಿ ಗುಡ್ಡಕ್ಕೆ ಚಾರಣವನ್ನು ಹಮ್ಮಿಕೊಳ್ಳಲಾಯಿತು. ನಾಲ್ಕನೆ ದಿನ ಸರ್ವಧರ್ಮ ಪ್ರಾರ್ಥನೆಯನ್ನು ನಡೆಸಲಾಯಿತು. ಈ ತರಬೇತಿ ಶಿಬಿರದಲ್ಲಿ ಶ್ರೀ ರಂಗಸ್ವಾಮಿ ಹೆಚ್.ಡಬ್ಲ್ಯೂ.ಬಿ.(ಆರ್) ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಜೆ.ಎಲ್. ಲೀಲಾಮಹೇಶ್ವರ್, ಹೆಚ್.ಡಬ್ಲ್ಯೂ.ಬಿ.(ಎಸ್) ಮತ್ತು ರೋವರ್ ಲೀಡರ್ ಶ್ರೀ ಬೋರೇಗೌಡ ತರಬೇತಿ ನಾಯಕರುಗಳಾಗಿ ಭಾಗವಹಿಸಿದ್ದರು.

ಶಿಬಿರದ ನಾಲ್ಕನೇ ದಿನ ರೋವರ್‌ಗಳಿಗೆ ಪ್ರಮಾಣ ಪತ್ರಗಳನ್ನು ವಿತರಿಸಿದ ಕಾರ್ಯಕ್ರಮದಲ್ಲಿ ಸ್ಥಳೀಯ ಸಂಸ್ಥೆಯ ಸಹಾಯಕ ಜಿಲ್ಲಾ ಆಯುಕ್ತರುಗಳಾದ ಶ್ರೀ ಕೃಷ್ಣಮೂರ್ತಿ ಭಟ್, ಶ್ರೀ ಬಿ.ಕೆ. ಯೋಗೀಶಚಾರ್, ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀಮತಿ ಕಾಮೇಶ್ವರಿ ಭಟ್ ಮತ್ತು ತಾಲ್ಲೂಕು ಸಂಘಟಕರಾದ ಶ್ರೀಮತಿ ಕುಸುಮ ಭಾಗವಹಿಸಿದ್ದರು.

## ಕಾರವಾರ

ದಿನಾಂಕ 18-11-2015 ರಂದು ಧ್ವಜ ಚೀಟಿ ಬಿಡುಗಡೆ ಹಾಗೂ ಸೈಕಲ್ ಜಾಥಾವನ್ನು ಜಿಲ್ಲಾ ಮಟ್ಟದಲ್ಲಿ ಹಮ್ಮಿಕೊಳ್ಳಲಾಗಿತ್ತು. ಧ್ವಜ ಚೀಟಿಯನ್ನು ಜಿಲ್ಲಾಸಂಸ್ಥೆಯ ಅಧ್ಯಕ್ಷರು ಹಾಗು ಉ.ಕ. ಜಿಲ್ಲಾಧಿಕಾರಿಗಳಾದ ಶ್ರೀ ಉಜ್ವಲಕುಮಾರ ಘೋಷ್ ರವರು ಬಿಡುಗಡೆ ಮಾಡಿ ನಂತರ ಸ್ಕೌಟ್ಸ್-ಗೈಡ್ಸ್, ರೇಂಜರ್ಸ್-ರೋವರ್ಸ್‌ಗಳ ಸೈಕಲ್ ಜಾಥಾವನ್ನು ಹಸಿರು ನಿಶಾನೆ ತೋರಿಸುವುದರ ಮೂಲಕ ಉದ್ಘಾಟಿಸಿದರು.

## ಕೊಪ್ಪಳ

ದಿನಾಂಕ 09-11-2015 ರಂದು ಸಂಸ್ಥಾಪಕರ ದಿನಾಚರಣೆಯ ಅಂಗವಾಗಿ ಸ್ಕೌಟ್ಸ್-ಗೈಡ್ಸ್‌ಗಳಿಂದ ಸೈಕಲ್ ಜಾಥಾವನ್ನು ನಡೆಸಲಾಯಿತು. ಹೆಚ್ಚುವರಿ ಜಿಲ್ಲಾಧಿಕಾರಿಯವರಾದ ಶ್ರೀ ಪ್ರವೀಣ್ ಕುಮಾರ್ ರವರು ಸೈಕಲ್ ಜಾಥಾವನ್ನು ಉದ್ಘಾಟಿಸಿದರು. 350 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಶ್ರೀಮತಿ ಸಂಧ್ಯಾಮಾದಿನೂರ, ಡಿ.ಸಿ.(ಗೈ) ಶ್ರೀ ಮಲ್ಲಿಕಾರ್ಜುನ ಚಾಕಿಮಠ, ಶ್ರೀ ಜಯರಾಜ ಬೂಸದ ಎ.ಪಿ.ಎಸ್. ಶ್ರೀ ಪ್ರಹ್ಲಾದ ಬಡಿಗೇರ, ಹೆಚ್.ಡಬ್ಲ್ಯೂ.ಬಿ. ಹಾಗು ಶ್ರೀ ಎ.ಎಸ್. ಶಿವುಕುಮಾರ ಎ.ಎಸ್.ಓ.ಸಿ., ಭಾಗವಹಿಸಿದ್ದರು.

* ದಿನಾಂಕ 25-11-2015 ರಂದು ಸ್ಥಳೀಯ ಸಂಸ್ಥೆ ಕೊಪ್ಪಳ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಸಸಿಗಳಿಗೆ ನೀರೆರೆಯುವ ಮೂಲಕ ಮುಖ್ಯ ಅತಿಥಿಗಳಾದ ಶ್ರೀ ರವಿ ಬಿಸರಳಿ, ಜಿಲ್ಲಾ ಪಂಚಾಯತ ಯೋಜನಾ ನಿರ್ದೇಶಕರು ಹಾಗೂ ಶ್ರೀ ಹೆಚ್.ಎಂ. ಸಿದ್ಧರಾಮಸ್ವಾಮಿ, ಜಿಲ್ಲಾ ಆಯುಕ್ತರು ಉದ್ಘಾಟಿಸಿದರು. ಶ್ರೀ ಮಲ್ಲಿಕಾರ್ಜುನ ಚಾಕಿಮಠ, ಕಾರ್ಯದರ್ಶಿ ಶ್ರೀ ಎ. ಯರ್‍ರಣ್ಣ, ಜಿಲ್ಲಾ ತರಬೇತಿ ಆಯುಕ್ತರು ಶ್ರೀ ಮಂಜುನಾಥ ಗೊಂಡಬಾಳ ಎಲ್.ಐ.ಎ., ಅಧ್ಯಕ್ಷರು ಶ್ರೀ ಎಂ.ಕೆ. ಹಿರೇಮಠ ಎಲ್.ಐ.ಎ., ಕಾರ್ಯದರ್ಶಿ ಭಾಗವಹಿಸಿದ್ದರು.

* ದಿನಾಂಕ 10-11-2015ರಂದು ಟಿಪ್ಪು ಸುಲ್ತಾನ್ ಜಯಂತಿಯನ್ನು ಸರಕಾರಿ ಹೈಯರ್ ಪ್ರೈಮರಿ ಶಾಲೆ ಹಾಗೂ ಸರಕಾರಿ ಎಲ್.ಪಿ.ಎಸ್. ಉರ್ದುಶಾಲೆಗಳ ಸಂಯುಕ್ತಾಶ್ರಯದಲ್ಲಿ ಆಚರಿಸಲಾಯಿತು. ಈ ಸಮಾರಂಭದಲ್ಲಿ ಕಬ್ಸ್-ಬುಲ್ ಬುಲ್ಸ್, ಸ್ಕೌಟ್‌ಗಳು ಹಾಗು 2 ಶಾಲೆಗಳ ಮುಖ್ಯೋಪಾಧ್ಯಾಯರು ಭಾಗವಹಿಸಿದ್ದರು.

* ದಿನಾಂಕ 01-12-2015 ರಂದು ಒಂದು ದಿನದ ಹೊರ ಸಂಚಾರವನ್ನು ಸರಸ್ವತಿ ವಿದ್ಯಾಮಂದಿರ ಪ್ರೌಢಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳಿಂದ ನಡೆಸಲಾಯಿತು. ಈ ಹೊರಸಂಚಾರದಲ್ಲಿ ಶ್ರೀ ಜಯರಾಜ ಬೂಸದ, ಸಹ ಕಾರ್ಯದರ್ಶಿ, ಶಾಲೆಯ ಪ್ರಧಾನ ಕಾರ್ಯದರ್ಶಿ, ಶ್ರೀ ಮಹಮ್ಮದ್ ಅತ್ತನೂರ, ಶಾಲೆಯ ಮುಖ್ಯ ಗುರುಗಳು ಶ್ರೀಮತಿ ರೇಣುಕಾ ಅತ್ತನೂರ ಭಾಗವಹಿಸಿದ್ದರು.

* ದಿನಾಂಕ 05-12-2015 ರಿಂದ 07-12-2015 ರ ವರೆಗೆ ಸರಸ್ವತಿ ವಿದ್ಯಾಮಂದಿರ ಪ್ರೌಢಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳಿಗಾಗಿ ಶಿಬಿರವಾಸ ತರಬೇತಿಯನ್ನು ಪ್ರೌಢಶಾಲೆಯ ನೂತನ ಕಟ್ಟಡ ನಿರ್ಮಾಣದ ಆವರಣದಲ್ಲಿ ನಡೆಸಲಾಯಿತು. ಈ ಶಿಬಿರದ ಉದ್ಘಾಟನಾ ಕಾರ್ಯಕ್ರಮದಲ್ಲಿ ಶ್ರೀ ಜಯರಾಜ ಬೂಸದ ಸಹಕಾರ್ಯದರ್ಶಿ, ಶಾಲೆಯ ಪ್ರಧಾನ ಕಾರ್ಯದರ್ಶಿ, ಶ್ರೀ ಮಹಮ್ಮದ್ ಅತ್ತನೂರ, ಶಾಲೆಯ ಮುಖ್ಯ ಗುರುಗಳು ಶ್ರೀಮತಿ ರೇಣುಕಾ ಅತ್ತನೂರ, ಶಿಕ್ಷಕರ ಕಲಾವಿದರು ಶ್ರೀ ವೈಶಂಪಾಯ, ಶ್ರೀ ಯಮುನಪ್ಪ ಭಜಂತ್ರಿ, ಶ್ರೀ ಮಹಮ್ಮದ್ ಗೌಸ, ಶ್ರೀ ಖಾಸಿಂ ಹುಡೇದ ರವರು ಭಾಗವಹಿಸಿದ್ದರು.

## ಕೊಡಗು

ದಿನಾಂಕ 07-11-2015 ರಂದು ಸ್ಕೌಟ್ಸ್-ಗೈಡ್ಸ್ ಧ್ವಜ ದಿನಾಚರಣೆಯನ್ನು ಅಪರ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಧ್ವಜ ಬಿಡುಗಡೆ ಮಾಡುವುದರ ಮೂಲಕ ಆಚರಿಸಲಾಯಿತು. ಜಿಲ್ಲಾಧಿಕಾರಿಗಳ ಕಛೇರಿಯ ತಹಶೀಲ್ದಾರರಾದ ಶ್ರೀಮತಿ ಕುಸುಮ ಮತ್ತು ಶಿರಸ್ತೆದಾರರಾದ ಶ್ರೀಮತಿ ಭಾಗಲಕ್ಷ್ಮಿಯವರು ಧ್ವಜ ಬಿಡುಗಡೆ ಮಾಡಿದರು. ಈ ಸಂದರ್ಭದಲ್ಲಿ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಜಿಮ್ಮಿ ಸಿಕ್ವೆರ ರವರು ದಿನದ ಮಹತ್ವದ ಬಗ್ಗೆ ತಿಳಿಸಿದರು. ಜಿಲ್ಲಾ ಪ್ರಧಾನ ಆಯುಕ್ತರಾದ ಶ್ರೀ ಕೆ.ಬಿ. ಕಾಳಪ್ಪ, ಖಜಾಂಚಿ ಶ್ರೀ ಸೋಮಯ್ಯ, ಕಾರ್ಯದರ್ಶಿ ಕಛೇರಿ ಸಂಚಾಲಕಿ ಶ್ರೀಮತಿ ದಮಯಂತಿ ಅಲ್ಲದೆ ರಾಜರಾಜೇಶ್ವರಿ ಶಾಲೆಯ ಸ್ಕೌಟ್ಸ್‌ಗಳು, ಸ್ಕೌಟ್ ಮಾಸ್ಟರರಾದ ಶ್ರೀ ತಿಮ್ಮಯ್ಯ ಉಪಸ್ಥಿತರಿದ್ದರು. ಇದೇ ಸಂದರ್ಭದಲ್ಲಿ ಸೈಕಲ್ ಜಾಥಾಕ್ಕೆ ಉಪನಿರ್ದೇಶಕರಾದ ಶ್ರೀ ಬಸವರಾಜುರವರು ಚಾಲನೆ ನೀಡಿದರು.

## ರಾಮನಗರ

ದಿನಾಂಕ 07-11-2015 ರಂದು ಕನಕಪುರದಲ್ಲಿ "ಸಂಸ್ಥಾಪನಾ ದಿನಾಚರಣೆ" ಪ್ರಯುಕ್ತ ಸೈಕಲ್ ಜಾಥಾ ನಡೆಸಲಾಯಿತು. ಕನಕಪುರ ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಶಿವಕುಮಾರ್‌ರವರು ಜಾಥಾಕ್ಕೆ ಚಾಲನೆ ನೀಡಿದರು. ಶ್ರೀಮತಿ ಕುಮಾರಿ ಹೊನ್ನಮ್ಮ ಜಿಲ್ಲಾ ಸಂಘಟಕರು, ರಾಮನಗರ ಜಿಲ್ಲೆ, ಶ್ರೀ ಸಂಗಯ್ಯ ಮಠಪತಿ ತಾ॥ ಕಾರ್ಯದರ್ಶಿಗಳು, ಸ್ಕೌಟರ್ಸ್ ಮತ್ತು ಗೈಡರ್ಸ್ ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ನಗರದ ಮುಖ್ಯ ರಸ್ತೆಗಳಲ್ಲಿ ಜಾಥಾ ನಡೆಸಿ ಸ್ಕೌಟ್ಸ್ ಮತ್ತು ಗೈಡ್ಸ್ ಕಾರ್ಯದ ಬಗ್ಗೆ ಅರಿವು ಹಾಗು ಪರಿಸರದ ಸಂರಕ್ಷಣೀಯ ಘೋಷಣೆಗಳೊಂದಿಗೆ ಸಾರ್ವಜನಿಕರ ಗಮನ ಸೆಳೆದರು.

* ದಿನಾಂಕ 20-11-2015 ರಂದು ಕಂಚುಗಲ್ಲು, ಬಂಡೆಮಠ, ಸಿದ್ಧಗಂಗಾ ಪ್ರೌಢಶಾಲೆ ಆವರಣದಲ್ಲಿ ಜಿಲ್ಲಾ ಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶವನ್ನು ನೆರವೇರಿಸಿಲಾಯಿತು. ಈ ಕಾರ್ಯಕ್ರಮದಲ್ಲಿ 65 ಸ್ಕೌಟರ್ಸ್ ಮತ್ತು ಗೈಡರ್ಸ್ ಭಾಗವಹಿಸಿದ್ದರು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ರಂಗಸ್ವಾಮಿ ಮತ್ತು ಶ್ರಿ ಎನ್. ಶ್ರೀನಿವಾಸನ್ ರಾಜ್ಯ ಸ್ಥಾನಿಕ ಆಯುಕ್ತರು ಕಾರ್ಯಕ್ರಮವನ್ನು ಉದ್ಘಾಟಿಸಿದರು.

ಶ್ರೀ ಎನ್. ಶ್ರೀನಿವಾಸನ್ ರವರು ಮೂಲ ಸಿದ್ಧಾಂತ ತತ್ವಗಳು, ನಿಯಮಗಳಲ್ಲಿ ಆದ ಬದಲಾವಣೆ ಬಗ್ಗೆ ಮಾಹಿತಿ ನೀಡಿದರು. ಶ್ರಿಮತಿ ಬಿ.ವಿ. ರಾಮಲತಾ ಸಹಾಯಕ ರಾಜ್ಯ ಆಯುಕ್ತರು ದಳಸಭೆಗಳನ್ನು ನಡೆಸುವ ಬಗ್ಗೆ ಮತ್ತು ಕಾರ್ಯಕ್ರಮ ಯೋಜನೆ, ದಾಖಲೆಗಳ ಬಗ್ಗೆ ಮಾಹಿತಿಯನ್ನು ನೀಡಿದರು.

ಈ ಕಾರ್ಯಕ್ರಮದಲ್ಲಿ ಶ್ರೀ ಶಿವನಂಜಪ್ಪ, ಜಿಲ್ಲಾ ಕಾರ್ಯದರ್ಶಿಗಳು ಶ್ರೀಮತಿ ಕುಮಾರಿ ಹೊನ್ನಮ್ಮ, ಶ್ರೀ ಚಂದ್ರಶೇಖರ್, ಮುಖ್ಯೋಪಾಧ್ಯಾಯರು, ಸಿದ್ಧಗಂಗಾ ಪ್ರೌಢಶಾಲೆ, ಶ್ರೀ ವೆಂಕಟೇಶಯ್ಯ, ಮಾಗಡಿ ತಾ॥ ಕಾರ್ಯದರ್ಶಿಗಳು ಉಪಸ್ಥಿತರಿದ್ದರು.

ಮುಕ್ತಾಯ ಸಮಾರಂಭದಲ್ಲಿ ಶ್ರೀ ಬಸವಲಿಂಗ ಆನಂದ ಸ್ವಾಮಿಗಳು ವನಕಲ್ಲುಮಠ, ನೆಲಮಂಗಲ ತಾ॥ ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಶಿಬಿರಾರ್ಥಿಗಳಿಗೆ ಆಶೀರ್ವಚನ ನೀಡಿ, ಸ್ಕೌಟ್ಸ್-ಗೈಡ್ಸ್ ಉತ್ತಮವಾದ ಶಿಸ್ತುವುಳ್ಳ ಸಂಸ್ಥೆಯಾಗಿದೆ ಇದರಿಂದ ಮಕ್ಕಳನ್ನು ಉತ್ತಮ ಪ್ರಜೆಯನ್ನಾಗಿ ಮಾಡುವ ಸಂಸ್ಥೆಯಾಗಿದೆ. ತಮ್ಮಿಂದ ಎಲ್ಲಾ ಸಹಕಾರ ನೀಡುವುದಾಗಿ ತಿಳಿಸಿದರು.

---

**The Most Worth - while thing is to try to put happiness into the lives of others**

**- Lord Baden Powell**

---

## ರಾಯಚೂರು

ದಿನಾಂಕ 17-11-2015 ರಿಂದ 24-11-2015 ರ ವರೆಗೆ ರಾಯಚೂರು ಜಿಲ್ಲಾ ಸಂಸ್ಥೆಯ ಸುಕ್ಷೇತ್ರ ಗುರುಗುಂತಾ ಅಮರೇಶ್ವರದಲ್ಲಿ ಹಮ್ಮಿಕೊಂಡಿದ್ದ ಸ್ಕೌಟ್ ಮಾಸ್ಟರ್ಸ್ ಮತ್ತು ಗೈಡ್ ಕ್ಯಾಪ್ಟನ್ನರ ಮೂಲ ತರಬೇತಿ ಶಿಬಿರದ ಸಮಾರೋಪ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಶ್ರೀ ಅಮರ ಗುಂಡಪ್ಪ ಮೇಟಿ ಅವರು ಪ್ರತಿಯೊಬ್ಬ ವಿದ್ಯಾರ್ಥಿಯಲ್ಲಿ ಹಾಗೂ ಯುವಕರಲ್ಲಿ ಶಿಸ್ತು, ಸೇವಾ ಮನೋಭಾವ, ದೇಶಭಕ್ತಿ ಮುಂತಾದ ಮಾನವೀಯ ಮೌಲ್ಯಗಳನ್ನು ಬೆಳೆಸಲು ಸ್ಕೌಟ್ಸ್-ಗೈಡ್ಸ್ ಸಹಕಾರಿಯಾಗಿದೆ ಎಂದು ಹೇಳಿದರು.

ಸಮಾರಂಭದ ಮುಖ್ಯ ಅತಿಥಿಗಳಾಗಿ ಮಾತನಾಡಿದ ಶ್ರೀ ಬಸವರಾಜ, ದಾವಣಗೆರೆ, ತರಬೇತಿ ಪಡೆದ ಎಲ್ಲ ಶಿಕ್ಷಕರು ಪ್ರಾಮಾಣಿಕತೆಯಿಂದ ಶಾಲೆಗಳಲ್ಲಿ ಘಟಕಗಳನ್ನು ಪ್ರಾರಂಭಿಸಿ ವಿದ್ಯಾರ್ಥಿಗಳ ಸರ್ವತೋಮುಖ ಏಳಿಗೆಗೆ ಶ್ರಮಿಸಲು ಕರೆ ನೀಡಿದರು. ಈ ಸಂದರ್ಭದಲ್ಲಿ ಶ್ರೀಮತಿ ಅಜೀಜಾ ಸುಲ್ತಾನ ಜಿಲ್ಲಾ ಆಯುಕ್ತರು(ಗೈ) ಇವರು ತರಬೇತಿಯ ವರದಿ ನೀಡಿದರು. ಶ್ರೀ ರಾವುತರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು ಇವರು ಎಲ್ಲರನ್ನು ಸ್ವಾಗತಿಸಿ ಪ್ರಾಸ್ತಾವಿಕವಾಗಿ ಮಾತನಾಡಿದರು. ಈ ಸಂದರ್ಭದಲ್ಲಿ ಶ್ರೀ ಆದೆಪ್ಪ ಮನಗೂಳಿ, ಗುತ್ತೆದಾರರು, ಶ್ರೀ ಆರ್.ಹೆಚ್. ಸಾಗರ್, ಡಿ.ಟಿ.ಸಿ.,(ಎಸ್), ಶ್ರೀ ಪಂಚಾಕ್ಷರಯ್ಯ ಹಿರೇಮಠ ಖಜಾಂಚಿಗಳು ವೇದಿಕೆಯಲ್ಲಿದ್ದರು. ಶ್ರೀ ಟಿ. ಶರಣಪ್ಪ, ಜಂಟಿ ಕಾರ್ಯದರ್ಶಿಗಳು ಇವರು ವಂದಿಸಿದರು. ಶ್ರೀ ಶಿವಪುತ್ರಪ್ಪ ಭೂತಾಲ್ ಕಾರ್ಯದರ್ಶಿಗಳು ಕಾರ್ಯಕ್ರಮವನ್ನು ನಿರೂಪಿಸಿದರು. ಸ್ಕೌಟ್ ಮಾಸ್ಟರ್ ಮೂಲ ತರಬೇತಿ ಶಿಬಿರಕ್ಕೆ 47 ಜನ ಶಿಕ್ಷಕರು, ಕಬ್ ಮಾಸ್ಟರ್ ತರಬೇತಿಗೆ 12 ಜನ ಶಿಕ್ಷಕರು ಹಾಗೂ ಗೈಡ್ ಕ್ಯಾಪ್ಟನ್ನರ ಮೂಲ ತರಬೇತಿಗೆ 23 ಜನ ಶಿಬಿರಾರ್ಥಿಗಳು ಭಾಗವಹಿಸಿದ್ದರು.

## ಶಿವಮೊಗ್ಗ

ದಿನಾಂಕ 07-11-2015 ರಂದು ಸಂಸ್ಥಾಪನಾ ದಿನಾಚರಣೆಯ ಅಂಗವಾಗಿ ಜಿಲ್ಲಾ ಸಂಸ್ಥೆ ಮತ್ತು ಸ್ಥಳೀಯ ಸಂಸ್ಥೆ ಆಶ್ರಯದಲ್ಲಿ ಬೆಳಗ್ಗೆ ಜಿಲ್ಲಾ ಸ್ಕೌಟ್ ಭವನದಿಂದ, ಸುಮಾರು 200 ಸ್ಕೌಟ್-ಗೈಡ್‌ಗಳಿಂದ ಸೈಕಲ್ ಜಾಥಾ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಈ ಕಾರ್ಯಕ್ರಮಕ್ಕೆ ಶ್ರೀ ಎಸ್. ಉಮೇಶ್ ಶಾಸ್ತ್ರಿ, ಜಿಲ್ಲಾ ಆಯುಕ್ತರು (ಸ್ಕೌಟ್) ಇವರು ಹಸಿರು ಬಾವುಟ ತೋರಿಸಿದರು. ಶಿವಮೊಗ್ಗದ ಕೆಲವು ಮುಖ್ಯ ಬೀದಿಗಳಲ್ಲಿ ಸ್ಕೌಟ್-ಗೈಡ್‌ಗಳು "ಶಿಶುಪಾಲನೆ ನಮ್ಮೆಲ್ಲರ ಹೊಣೆ", "ಶಾಲೆ ಬಿಟ್ಟ ಮಕ್ಕಳನ್ನು ಮರಳಿ ಶಾಲೆಗೆ ಸೇರಿಸಿ", "ಇಂದಿನ ಬಾಲಕ ನಾಳಿನ ನಾಗರಿಕ, ಇಂದಿನ ಬಾಲಕಾರ್ಮಿಕ ನಾಳಿನ ಕಾರ್ಮಿಕ", "ಬಾಲಕಾರ್ಮಿಕ ಪದ್ಧತಿ ನಿಷೇಧಿಸಿ", "ಮಕ್ಕಳ ದುಡಿತ ರಾಷ್ಟ್ರಕ್ಕೆ ಕಳಂಕ", "ಕುಣಿಯೋ ವಯಸ್ಸು, ಕಲಿಯೋ ಮನಸ್ಸು, ಮಗುವಿಗೆ ಏಕೆ ದುಡಿಯೋ ಕನಸು" ಮುಂತಾದ ಮಾಹಿತಿ ಫಲಕಗಳನ್ನು ಹಿಡಿದುಕೊಂಡು ಘೋಷಣೆ ಕೂಗುತ್ತ, ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಸೇರಿದರು. ನಂತರ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಸಂಸ್ಥಾಪನಾ ದಿನಾಚರಣೆಯ ಬಗ್ಗೆ ಶ್ರೀ ಕೆ.ಪಿ. ಬಿಂದುಕುಮಾರ್, ಜಿಲ್ಲಾ ಕಾರ್ಯದರ್ಶಿ ರವರು ಮಾತನಾಡಿದರು. ಶ್ರೀ ಹೆಚ್. ಪರಮೇಶ್ವರ್ ಜಿಲ್ಲಾ ಖಜಾಂಚಿ ಶ್ರೀ ಆರ್.ಕೆ. ರಾಮಸಿಂಗ್ ಎ.ಡಿ.ಸಿ.,(ಕ) ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಡಿ.ಎನ್. ನೂರು ಅಹಮದ್ ಶ್ರೀ ಎ.ವಿ. ರಾಜೇಶ್, ಪ್ರೀ ಎ.ಎಲ್.ಟಿ.(ರೋ) ಕಾರ್ಯಕ್ರಮವನ್ನು ನಿರೂಪಿಸಿದರು. ಕು॥ ಪ್ರಿಯಾಂಕ, ಜಿಲ್ಲಾ ಸಂಘಟಕರು, ಸ್ಕೌಟ್ ಗೈಡ್‌ಗಳು ಹಾಗೂ ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್ ರವರುಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

## ಶಿರಸಿ

ದಿನಾಂಕ 20-11-2015 ರಂದು ಸಂಸ್ಥಾಪನಾ ಧ್ವಜ ದಿನಾಚರಣೆಯ ಅಂಗವಾಗಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಶಿರಸಿ ಜಿಲ್ಲಾ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆ ಸಂಯುಕ್ತವಾಗಿ ಜರುಗಿಸಿದ ಸೈಕಲ್ ಮತ್ತು ಕಾಲ್ನಡಿಗೆ ಜಾಥಾವನ್ನು ಶಿರಸಿ ನಗರದಲ್ಲಿ ಆಯೋಜಿಸಲಾಗಿತ್ತು. ಜಿಲ್ಲಾ ಸಂಸ್ಥೆಯ ಅಧ್ಯಕ್ಷರು ಹಾಗು ಮಾನ್ಯ ಸಹಾಯಕ ಆಯುಕ್ತರಾದ ಡಾ. ನಾಗೇಂದ್ರ

ಎಫ್ ಹೊನ್ನಳ್ಳಿ ಧ್ವಜ ಬಿಡುಗಡೆ ಮಾಡಿ, ಸೈಕಲ್ ಮತ್ತು ಕಾಲ್ನಡಿಗೆ ಜಾಥಾಕ್ಕೆ ಚಾಲನೆ ನೀಡಿದರು. ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರಿ ಎಂ.ಎಸ್. ಪ್ರಸನ್ನಕುಮಾರ್, ದೈಹಿಕ ಶಿಕ್ಷಣ ಪರಿವೀಕ್ಷಣಾಧಿಕಾರಿ ಶ್ರೀ ವಸಂತ ಭಂಡಾರಿ, ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀಮತಿ ಸೂರಜರಾಣಿ ಪ್ರಭು, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎಂ. ಭಟ್, ಜಿಲ್ಲಾ ಆಯುಕ್ತರುಗಳಾದ ಶ್ರೀ ವಿ.ಎಚ್. ಭಟ್ಕಳ, ಶ್ರೀಮತಿ ಜ್ಯೋತಿ ವಿ ಭಟ್, ಜಿಲ್ಲಾ ಕಾರ್ಯದರ್ಶಿ ಸುರೇಶ ಪಟಗಾರ, ಖಜಾಂಚಿ ಶ್ರೀ ಎಂ. ಎಸ್. ನಾಯ್ಕ, ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

ಸಹಾಯಕ ಆಯುಕ್ತರ ಕಾರ್ಯಾಲಯದಿಂದ ಆರಂಭವಾದ ಜಾಥಾವು ಝೂ ಸರ್ಕಲ್, ಐದು ರಸ್ತೆ, ಹಳೆ ಬಸ್ ನಿಲ್ದಾಣ, ಶಿವಾಜಿ ಸರ್ಕಲ್, ಸಿ.ಪಿ. ಬಜಾರ್, ದೇವಿಕೆರೆ, ಅಶ್ವಿನಿ ಸರ್ಕಲ್, ರಾಘವೇಂದ್ರ ಸರ್ಕಲ್ ಮಾರ್ಗವಾಗಿ ಸಂಚರಿಸಿ ಜಿಲ್ಲಾ ಸಂಸ್ಥೆಯ ಕಾರ್ಯಾಲಯದಲ್ಲಿ ಸಂಪನ್ನಗೊಂಡಿತು. ಪರಿಸರ ಜಾಗೃತಿ, ರಕ್ತದಾನ, ಮತದಾನ ಇನ್ನಿತರ ಜಾಗೃತಿ ನೀಡುವ ಫಲಕಗಳೊಂದಿಗೆ ಜಾಥಾ ಸಾಗಿತು. ರೋವರ್ ಸ್ಕೌಟ್ ಲೀಡರ್ ಶ್ರೀ ಸುರೇಶ, ಸ್ಕೌಟ್ ಮಾಸ್ಟರ್ ಶ್ರೀ ಕಮಲಾಕರ ಪಟಗಾರ, ಜಾತ್ರಾ ನೇತೃತ್ವ ವಹಿಸಿದ್ದರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಗಂಗಾಧರ ಪಟಗಾರ ಕಾರ್ಯಕ್ರಮ ಸಂಘಟಿಸಿದ್ದರು. ನಗರದ ವಿವಿಧ ಶಾಲೆ-ಕಾಲೇಜುಗಳಿಂದ 103 ಸ್ಕೌಟ್ಸ್, 125 ಗೈಡ್ಸ್, 17 ರೋವರ್ಸ್ ಮತ್ತು 22 ರೇಂಜರ್ಸ್ ಭಾಗವಹಿಸಿದ್ದರು.

## ವಿಜಯಪುರ

ದೇಶಕಂಡ ಅಪರೂಪದ ರಾಜಕಾರಣಿ, ಸಮಾಜ ಸೇವಕ ಸ್ಕೌಟ್ಸ್-ಗೈಡ್ಸ್ ಪೋಷಕರಾಗಿದ್ದ ಕೊಂಡಜ್ಜಿ ಬಸಪ್ಪನವರು ಜನಮಾನಸಕ್ಕೆಲ್ಲ ಒಬ್ಬ ವ್ಯಕ್ತಿಯಾಗಿರದೆ ನವಚೈತನ್ಯದ ಶಕ್ತಿಯಾಗಿದ್ದರು. ಎಂದು ಶ್ರೀ ಶರಣು ಸಬರದ ಹೇಳಿದರು. ಜಿಲ್ಲಾ ಸ್ಕೌಟ್ ಭವನದಲ್ಲಿ ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಅವರು ಮಾತನಾಡಿದರು. ಕರ್ನಾಟಕದ ಸ್ಕೌಟ್ಸ್-ಗೈಡ್ಸ್ ಬೆಳವಣಿಗೆಯಲ್ಲಿ ಕೊಂಡಜ್ಜಿ ಬಸಪ್ಪನವರ ಕುರಿತು ಉಪನ್ಯಾಸವನ್ನು ಶ್ರೀ ಎಸ್. ಪಾಟೀಲ ಅವರು ನೀಡಿ, ಜೀವನ ಸಾಧನೆ ಮತ್ತು ಸ್ಕೌಟ್ಸ್ ಚಳುವಳಿಯು ನಡೆದು ಬಂದ ದಾರಿಯನ್ನು ಪರಿಚಯಿಸಿದರು.

ವೇದಿಕೆಯ ಮೇಲೆ ಸರ್ವಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ಶ್ರೀ ಬಿ.ಎಂ. ಬಡಿಗೇರ, ಶ್ರೀ ಪಿ.ಎಸ್. ಕುಂಬಾರ, ಶ್ರೀ ಡಿ.ಎಲ್. ಪಿಂಜಾರ ಮತ್ತು ಶ್ರೀಮತಿ ಗಂಗುಬಾಯಿ ಬಿಸನಾಳ ಉಪಸ್ಥಿತರಿದ್ದರು. ಕಾರ್ಯಕ್ರಮದಲ್ಲಿ ಜಿಲ್ಲೆಯ 105 ಸ್ಕೌಟರ್-ಗೈಡರ್ ಪಾಲ್ಗೊಂಡಿದ್ದರು. ಶ್ರೀ ಜಿ.ಬಿ. ಗಳವೆ ಕಾರ್ಯಕ್ರಮ ನಿರೂಪಿಸಿದರು. ಶ್ರೀ ಬಿ.ಎಂ. ಬಡಿಗೇರ ಸ್ವಾಗತಿಸಿದರು. ಶ್ರೀ ಎಸ್.ಎಸ್. ಬೊಮನಳ್ಳಿ ವಂದಿಸಿದರು.

* ಶಿಕ್ಷಕ ಬಳಗವು ವೃತ್ತಿ ಜೀವನದಲ್ಲಿ ಹತ್ತು ಹಲವು ತರಬೇತಿಗಳ ಮೂಲಕ ವಿವಿಧ ತರಬೇತಿಗಳನ್ನು ಪಡೆಯುತ್ತಿದ್ದು ಅದನ್ನು ಪ್ರಾಮಾಣಿಕವಾಗಿ ತಮ್ಮ ತಮ್ಮ ಶಾಲಾ ಮಕ್ಕಳಿಗೆ ತಲುಪಿಸುವ ಕಾರ್ಯ ಮಾಡಬೇಕು ಎಂದು ಜಿಲ್ಲಾ ಸ್ಕೌಟ್ಸ್ ಪ್ರಧಾನ ಆಯುಕ್ತ ಶ್ರೀ ಸಿದ್ದಣ್ಣ ಸಕ್ರಿ ಹೇಳಿದರು. ನಗರದ ಸ್ಕೌಟ್ಸ್ ಭವನದಲ್ಲಿ ಜಿಲ್ಲಾ ಸಂಸ್ಥೆಯಿಂದ ನಡೆಸಲಾದ ಸ್ಕೌಟರ್-ಗೈಡರ್ ಸಮಾವೇಶದಲ್ಲಿ ಪಾಲ್ಗೊಂಡು ಮಾತನಾಡಿದ ಅವರು ಪಡೆದ ಸಂಪನ್ಮೂಲ ಸದ್ಬಳಕೆಯಾಗ ದಿದ್ದರೆ ಅದು ಅಪರಾಧವಾದೀತು ಎಂದು ಎಚ್ಚರಿಕೆ ನೀಡಿ ಶಾಲೆಯಲ್ಲಿ ಕಡ್ಡಾಯವಾಗಿ ಸ್ಕೌಟ್ಸ್-ಗೈಡ್ಸ್ ದಳಗಳನ್ನು ಕ್ರಿಯಾಶೀಲವಾಗಿ ಮುನ್ನಡೆಸುವಂತೆ ಸಲಹೆ ಮಾಡಿದರು.

ಜಿಲ್ಲೆಯ ವಿವಿಧ ಶಾಲೆಗಳಿಂದ ಪಾಲ್ಗೊಂಡ 105 ಸ್ಕೌಟರ್-ಗೈಡರ್ ಅವರಿಗೆ ದಳ ಮುನ್ನಡೆಯುವ ನಿಟ್ಟಿನಲ್ಲಿ ಶ್ರೀ ಪರಶುರಾಮ ಕುಂಬಾರ, ಶ್ರೀ ಎಸ್.ಎಸ್. ಬೊಮ್ಮನಹಳ್ಳಿ ಹಾಗೂ ಶ್ರೀಮತಿ ಗಂಗೂಬಾಯಿ ಬಿಸನಾಳ ಮಾರ್ಗದರ್ಶನ ನೀಡಿದರು.

## ಯಾದಗಿರಿ

ದಿನಾಂಕ 07-11-2015 ರಂದು ಸಂಸ್ಥಾಪನಾ ದಿನಾಚರಣೆಯನ್ನು ಮಾನ್ಯ ಜಿಲ್ಲಾಧಿಕಾರಿಗಳ ಕಾರ್ಯಾಲಯದಲ್ಲಿ ಏರ್ಪಡಿಸಲಾಯಿತು. ಜಿಲ್ಲಾಧಿಕಾರಿಗಳಾದ ಶ್ರೀ ಮನೋಜ್ ಜೈನ್, ಧ್ವಜ ಚೀಟಿ ಬಿಡುಗಡೆ ಮಾಡಿದರು. ಹಾಗೂ ಸೈಕಲ್ ಜಾಥಕ್ಕೆ ಹಸಿರು ನಿಶಾನೆ ತೋರಿಸಿ ಚಾಲನೆ ನೀಡಿದರು. ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳಾದ ಶ್ರೀ ವಿನಾಯಕ ಪಾಟೀಲ್, ಜಿಲ್ಲಾ ಪಂಚಾಯತ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಾದ ಶ್ರೀ ವಿಕಾಸ್, ಶ್ರೀ ಕಿಶೋರ್ ಸುರಾಳ್‌ಕರ್, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಸಿ.ಎಂ. ಪಟ್ಟೇದಾರ್, ಜಿಲ್ಲಾ ಖಜಾಂಚಿ ಶ್ರೀ ಬಾಬು ದೋಕಾ, ಜಿಲ್ಲಾ ಆಯುಕ್ತರು(ಗೈ) ಶ್ರೀಮತಿ ನಾಗರತ್ನ ಅನಪೂರ, ಜಿಲ್ಲಾ ತರಬೇತುದಾರ ರಾಜೇಂದ್ರ ಜಿಲ್ಲಾ ಸಂಘಟನಾ ಆಯುಕ್ತರಾದ, ಶ್ರೀ ರಾಘವೇಂದ್ರ, ಜಿಲ್ಲಾ ಸಂಘಟಕರು (ಗೈ) ಶ್ರೀಮತಿ ನಾಗರತ್ನ ಪಾಟೀಲ್ 35 ಸ್ಕೌಟ್ ಮಾಸ್ಟರ್ಸ್, 25 ಗೈಡ್ ಕ್ಯಾಪ್ಟನ್‌ಗಳು 85 ಸ್ಕೌಟ್, 45 ಗೈಡ್‌ಗಳು ಭಾಗವಹಿಸಿದ್ದರು.

## PEARLS OF WISDOM -LORD BADEN POWELL

- A movement can not stand still. It must go forward or slide backwards. We aim to move ahead.
- Ambition to do the right is the only ambition that counts.
- A difficulty ceases to be a difficulty as soon as you smile at it and tackle it.
- All ceremonies should be short, simple and sincere.
- A leader is more like the poet-born-not manufactured.
- A first step should be to develop the spirit of goodwill and tolerance, truth and justice, in place of envy, hatred and malice.
- A Scout saying is, "Never say die, till you' re dead", and if he acts upto this, it will pull him out of many a bad place when everything seems to be going wrong for him, It means a mixture of pluck, patience and strength, which we call "ENDURANCE."
- As cubs, you must learn to use your eyes and ears and hands and mind.
- A slouching position, on the other hand depresses all the other organs, prevents from doing their work properly, so that a woman in that position is generally weak often ill.
- A present is not yours till you have thanked for it.

## PEARLS OF WISDOM -OLAVE BADEN POWELL

- Believe in God. He guides and protects you all through life, as I trust this account of my life has demonstrated.

  Discipline yourself daily by having a plan-not just vague, wishful thinking, commit yourself daily to do something, however small, for somebody else for, by making other people happy, you will find true happiness yourself.

# ಶ್ರದ್ಧಾಂಜಲಿ





**ಶ್ರೀ ಜಿ.ಸಿ. ದೇವರಾಜು,** ಎಲ್.ಟಿ. (ಸ್ಕೌಟ್ಸ್), ಸಹಶಿಕ್ಷಕರು. ಇಸ್ಲಾಮಿಯಾ ಆಂಗ್ಲೋ ಉರ್ದು ಪ್ರೌಢಶಾಲೆ, ಭಟ್ಕಳ ಇವರು ದಿನಾಂಕ 07-11-2015 ರಂದು ಭಟ್ಕಳದಲ್ಲಿ ನಿಧನ ಹೊಂದಿದರೆಂದು ತಿಳಿಸಲು ವಿಷಾಧಿಸುತ್ತೇವೆ.

ಇವರು ಕಾರವಾರ ಜಿಲ್ಲಾ ತರಬೇತಿ ಆಯುಕ್ತರಾಗಿ ರಾಜ್ಯ ಸಂಸ್ಥೆಯ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಹಾಗೂ ತರಬೇತುದಾರರಾಗಿ ಕಾರ್ಯ ನಿರ್ವಹಿಸಿದ್ದರು. ಇವರು ಪತ್ನಿ, ಇಬ್ಬರು ಮಕ್ಕಳನ್ನು ಅಗಲಿದ್ದಾರೆ. ಇವರ ಆತ್ಮಕ್ಕೆ ಚಿರಶಾಂತಿ ಸಿಗಲೆಂದು ಹಾಗೂ ಇವರ ನಿಧನದಿಂದ ಆದ ದುಃಖವನ್ನು ಭರಿಸುವ ಶಕ್ತಿಯನ್ನು ಅವರ ಕುಟುಂಬದವರಿಗೆ ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.





**ಶ್ರೀ ಶ್ರೀಕಂಠಮೂರ್ತಿ,** ಎ.ಎಲ್.ಟಿ., ಜಿಲ್ಲಾ ಕಾರ್ಯದರ್ಶಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಪ್ರವಾಸ ಕೈಕೊಂಡ ಸಮಯದಲ್ಲಿ ಮಂಗಳೂರು ಜಿಲ್ಲೆಯ ಉಪ್ಪಿನಂಗಡಿ ಬಳಿ ರಸ್ತೆ ಅಪಘಾತದಲ್ಲಿ ಅಕಾಲಿಕ ಮರಣ ಹೊಂದಿದ್ದಾರೆಂದು ತಿಳಿಸಲು ವಿಷಾಧಿಸುತ್ತೇವೆ.

ಇವರು ದೇವನಹಳ್ಳಿ ತಾಲ್ಲೂಕಿನ ವಿಜಯಪುರ ಗ್ರಾಮದಲ್ಲಿ ವಾಸವಾಗಿದ್ದು, ಸ್ಕೌಟ್ ಸಂಸ್ಥೆಯಲ್ಲಿ ಕ್ರಿಯಾತ್ಮಕವಾಗಿ 30 ವರ್ಷ ಸಕ್ರಿಯವಾಗಿ ಭಾಗವಹಿಸಿರುತ್ತಾರೆ. ಇವರ ನಿಧನವು ಸ್ಕೌಟ್ಸ್-ಗೈಡ್ಸ್ ಸಂಸ್ಥೆಗೆ ತುಂಬಲಾರದ ನಷ್ಟವಾಗಿದೆ. ಇವರ ಆತ್ಮಕ್ಕೆ ಚಿರಶಾಂತಿ ನೀಡಲೆಂದು ಹಾಗೂ ಇವರ ನಿಧನದಿಂದ ಆದ ದುಃಖವನ್ನು ಭರಿಸುವ ಶಕ್ತಿಯನ್ನು ಅವರ ಕುಟುಂಬದವರಿಗೆ ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

**ರಾಜ್ಯ ಕಾರ್ಯದರ್ಶಿ**



ದಿನಾಂಕ 17 ರಿಂದ 24 ನವೆಂಬರ್ 2015ರ ವರೆಗೆ ರಾಯಚೂರು ಜಿಲ್ಲೆಯ ಗುರುಗುಂತಾ ಅಮೇರೇಶ್ವರದಲ್ಲಿ ಹಮ್ಮಿಕೊಂಡಿದ್ದ ಮೂಲ ತರಬೇತಿ ಶಿಬಿರದ ಸಮಾರೋಪ ಸಮಾರಂಭದಲ್ಲಿ ಲಿಂಗಸಗೂರು ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ಅಮರಗುಂಡಪ್ಪ ಮೇಟಿಯವರು ಮಾತನಾಡುತ್ತಿರುವುದು.



ಇತ್ತೀಚೆಗೆ ಗದಗ್ ಗ್ರಾಮೀಣ ಸ್ಥಳೀಯ ಸಂಸ್ಥೆ ವತಿಯಿಂದ ಕೊಂಡಜ್ಜಿ ಬಸಪ್ಪ ಜನ್ಮಶತಮಾನೋತ್ಸವ ಅಂಗವಾಗಿ ಏರ್ಪಡಿಸಿದ್ದ ವಿವಿಧ ಸ್ಪರ್ಧೆಗಳನ್ನು ಸಂಸ್ಥೆಯ ಕಾರ್ಯಾಧ್ಯಕ್ಷ ಶ್ರೀ ಪಿ.ಎಂ. ಬಂದಕ್ಕನವರ್, ಸಂಸ್ಥೆಯ ಉಪಾಧ್ಯಕ್ಷ ಶ್ರೀ ಎನ್.ಸಿ. ಮುಕ್ಕಣ್ಣವರ ಅವರುಗಳು ಉದ್ಘಾಟಿಸುತ್ತಿರುವುದು.



ಹಜ್ ಯಾತ್ರಿಕರ ಸಹಾಯಕರಾಗಿ ರಾಜ್ಯ ಸರ್ಕಾರದಿಂದ ನಿಯೋಜನೆಗೊಂಡಿದ್ದ ಶ್ರೀ ಎ.ಪಿ. ಮೋಹಿಸಿನ್, ಸ್ಕೌಟ್ ಮಾಸ್ಟರ್, ಸಂಗೂರ್, ಹಾವೇರಿ ಜಿಲ್ಲೆ ಇವರು ಸೌಧಿ ಅರೇಬಿಯಾದ ಸ್ಕೌಟ್ ಸಂಸ್ಥೆಗೆ ಭೇಟಿ ನೀಡಿದಾಗ ವಿಶ್ವಭ್ರಾತೃತ್ವ ಪದಕ ನೀಡಲಾಯಿತು.



ಕೊಡಗು ಜಿಲ್ಲೆಯ ಜಿಲ್ಲಾಧಿಕಾರಿಗಳಾಗಿ ಅಧಿಕಾರ ವಹಿಸಿಕೊಂಡ ಶ್ರೀ ಮೀರ್ ಹನೀಫ್ ಅಹಮ್ಮದ್ ಅವರನ್ನು ಜಿಲ್ಲಾ ಸಂಸ್ಥೆವತಿಯಿಂದ ಜಿಲ್ಲಾ ಪದಾಧಿಕಾರಿಗಳು ಸ್ವಾಗತಿಸುತ್ತಿರುವುದು.



ದಿನಾಂಕ:–01.12.2015 ರಂದು ಕೊಪ್ಪಳದ ಸರಸ್ವತಿ ವಿದ್ಯಾಮಂದಿರದ ಪ್ರೌಢಶಾಲೆಯ ಸ್ಕೌಟ್–ಗೈಡ್‌ಗಳು ಹೊರಸಂಚಾರದಲ್ಲಿ ಭಾಗವಹಿಸಿರುವುದು.



ಇತ್ತೀಚೆಗೆ ಕೊಡುಗು ಜಿಲ್ಲೆ ಮಡಿಕೇರಿಯಲ್ಲಿ ಜರುಗಿದ ಸಿಕ್ಸರ್ಸ್ ಶಿಬಿರದಲ್ಲಿ ವಿವಿಧ ಚಟುವಟಿಕೆಗಳಲ್ಲಿ ತೊಡಗಿರುವ ಬುಲ್–ಬುಲ್ಸ್‌ಗಳು.

# ಸ್ಕೌಟ್ಸ್-ಗೈಡ್ಸ್ ಸಂಸ್ಥಪನಾ ದಿನಾಚರಣೆ ಪ್ರಯುಕ್ತ ಏರ್ಪಡಿಸಿದ ವಿವಿದ ಕಾರ್ಯಕ್ರಮಗಳ ವಿಹಂಗಮ ನೋಟ.



ಸೈಕಲ್ ಜಾಥಾದಲ್ಲಿ ಪಾಲ್ಗೊಂಡಿರುವ ಉಡುಪಿ ಜಿಲ್ಲೆಯ ಸ್ಕೌಟ್ಸ್‌ಗಳು



ಸೈಕಲ್ ಜಾಥಾದಲ್ಲಿ ಪಾಲ್ಗೊಂಡಿರುವ ಶಿವಮೊಗ್ಗ ಜಿಲ್ಲೆಯ ಸ್ಕೌಟ್ಸ್‌ಗಳು



ದಿನಾಂಕ:07.11.2015 ರಂದು ಸಂಸ್ಥಾಪನಾ ದಿನಾಚರಣೆ ಅಂಗವಾಗಿ ಧಾರವಾಡದಲ್ಲಿ ಸೈಕಲ್ ಜಾಥಾ ಹೊರಡಲು ಸಿದ್ದವಾಗಿರುವ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು.



ದಿನಾಂಕ:-07.11.2015 ರಂದು ಸ್ಥಾಪನಾದಿನ ಹಾಗೂ ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವ ಆಚರಣೆ ಪ್ರಯುಕ್ತ ಹಾಸನದಲ್ಲಿ ಹಮ್ಮಿಕೊಂಡಿದ್ದ ಪಥಚಲನದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿರುವುದು.



ದಿನಾಂಕ: 07.11.2015 ರಂದು ಸ್ಥಾಪನಾ ದಿನಾಚರಣೆ ಅಂಗವಾಗಿ ಚಾಮರಾಜನಗರದಲ್ಲಿ ಶ್ರೀ ಜಿ.ಆರ್. ಅಶ್ವತ್‌ನಾರಾಯಣ, ಜಿಲ್ಲಾ ಮುಖ್ಯ ಆಯುಕ್ತರು ಮತ್ತು ಶ್ರೀ ಮಲ್ಲಿಕಾರ್ಜುನ ಸ್ವಾಮಿ, ಶ್ರೀಮತಿ ಬರ್ನೆಂಡಿಟ್ ಲೀವಿಸ್, ಜಿಲ್ಲಾ ಆಯುಕ್ತರುಗಳು ಹಾಗೂ ಇತರರು ಚಿತ್ರದಲ್ಲಿದ್ದಾರೆ.



ದಿನಾಂಕ: 07.11.2015 ರಂದು ಹಾಸನದಲ್ಲಿ ನಡೆದ ಸ್ಥಾಪನಾ ದಿನಾಚರಣೆ ಅಂಗವಾಗಿ ಜಿಲ್ಲಾ ಪಂಚಾಯುತ್ ಅಧ್ಯಕ್ಷೆ ಶ್ರೀಮತಿ ಹೇಮಾವತಿ ಮಂಜುನಾಥ್ ಹಾಗೂ ಜಿಲ್ಲಾ ಪದಾಧಿಕಾರಿಗಳು ಧ್ವಜ ಚೀಟಿಗಳನ್ನು ಬಿಡುಗಡೆ ಮಾಡುತ್ತಿರುವುದು.



Field Marshal K.M Cariappa
seen with Rovers in Front of Travellors Bungalow
at Chitradurga on 27th Oct 1962.
Sri B.K. Seshadri, Present Secretary of
Bengaluru North is sitting in Front Row.

1978ರಲ್ಲಿ ಹಾಸನ ಜಿಲ್ಲೆ ಸಕಲೇಶಪುರದಲ್ಲಿ ನಡೆದ 15ನೇ ರಾಜ್ಯ ಮಟ್ಟದ ರ್‍ಯಾಲಿಯಲ್ಲಿ ಫೀಲ್ಡ್ ಮಾರ್ಷಲ್ ಕೆ.ಎಂ. ಕಾರಿಯಪ್ಪ ಅವರು ಶ್ರೀಮತಿ ಎನ್.ಕೆ. ಛಾಯ ಎ.ಎಸ್.ಓ.ಸಿ ಅವರಿಗೆ ಹತ್ತು ವರ್ಷದ ಸೇವಾ ಪದಕವನ್ನು ನೀಡುತ್ತಿರುವುದು.





ರ್ನಾಟಕ ಸರ್ಕಾರದ ಪ್ರವಾಸೋದ್ಯಮ ಇಲಾಖೆ ಮೂಲಕ ಏರ್ಪಡಿಸಿದ್ದ **'ಕರ್ನಾಟಕ ದರ್ಶನ'** ಪ್ರವಾಸದಲ್ಲಿ ಭಾಗವಹಿಸಿದ ರಾಯಚೂರು ಜಿಲ್ಲೆಯ ಸ್ಕೌಟ್ಸ್-ಗೈಡ್ಸ್‌ಗಳು ಮತ್ತು ಸಿಬ್ಬಂದಿ ವರ್ಗ.



ಕೊಡಗು ಜಿಲ್ಲೆಯ ಸೋಮವಾರಪೇಟೆ ಸಮೀಪದ ಕರಗಂದೂರಿನ ಸರ್ಕಾರಿ ಪ್ರಾಥಾಮಿಕಶಾಲೆ ಆವರಣದಲ್ಲಿ ಏರ್ಪಡಿಸಲಾಗಿದ್ದ ತಾಲ್ಲೂಕು ಮಟ್ಟದ ಶಿಬಿರದಲ್ಲಿ ಭಾಗವಹಿಸಿದ್ದ ಸ್ಕೌಟ್ಸ್-ಗೈಡ್ಸ್‌ಗಳು.



ದಿನಾಂಕ:-07.11.2015 ರಂದು ಚಿಕ್ಕಮಗಳೂರಿನ ಜಿಲ್ಲಾ ಭವನದಲ್ಲಿ ಸ್ಕೌಟ್-ಗೈಡ್ ಸಪ್ತಾಹದ ಉದ್ಘಾಟನೆ ಹಾಗೂ ಕೊಂಡಜ್ಜಿ ಬಸಪ್ಪ ಜನ್ಮಶತಮಾನೋತ್ಸವ ಆಚರಣೆ ಪ್ರಯುಕ್ತ ಏರ್ಪಡಿಸಿದ್ದ ಪ್ರಬಂಧ ಸ್ಪರ್ಧೆಯಲ್ಲಿ ಪಾಲ್ಗೊಂಡಿರುವ ಸ್ಕೌಟ್ಸ್-ಗೈಡ್ಸ್‌ಗಳು.



ದಿನಾಂಕ 23 ರಿಂದ 29 ನವೆಂಬರ್ 2015ರ ವರೆಗೆ ದಕ್ಷಿಣ ಕನ್ನಡ ಜಿಲ್ಲೆಯ ಪಿಲಿಕುಳ ಜಿಲ್ಲಾ ತರಬೇತಿ ಕೇಂದ್ರದಲ್ಲಿ ನಡೆದ ರೇಂಜರ್ ಲೀಡರ್‌ಗಳ ಮೂಲತರಬೇತಿ ಶಿಬಿರದ ನಾಯಕಿ, ಸಿಬ್ಬಂದಿ ವರ್ಗ ಹಾಗೂ ಶಿಬಿರಾರ್ಥಿಗಳನ್ನು ಚಿತ್ರದಲ್ಲಿ ಕಾಣಬಹುದು.

Regd. as News Paper (Magazine) RNI No : 13348/1959. Postal Regd. No. KA/BGGPO/2580/2015-17
Posted at: Bengaluru PSO, Mysore Road, Bengaluru-26 on 30-12-2015 (No. of Pages : 08+24 = 32)

1978ರಲ್ಲಿ ಹಾಸನ ಜಿಲ್ಲೆ
ಸಕಲೇಶಪುರದಲ್ಲಿ ನಡೆದ
15ನೇ ರಾಜ್ಯ ಮಟ್ಟದ ರ್‍ಯಾಲಿಯಲ್ಲಿ
ಫೀಲ್ಡ್ ಮಾರ್ಷಲ್ ಕೆ.ಎಂ. ಕಾರಿಯಪ್ಪ ಅವರು
ಸ್ಕೌಟ್ಸ್ ಗೈಡ್ಸ್‌ಗಳನ್ನು ಉದ್ದೇಶಿಸಿ
ಮಾತನಾಡುತ್ತಿರುವುದು.
ರಾಜ್ಯ ಮುಖ್ಯ ಆಯುಕ್ತ
ಶ್ರೀ ಕೊಂಡಜ್ಜಿ ಬಸಪ್ಪ
ಹಾಗೂ ಶ್ರೀ ಕೃಷ್ಣೋಜಿರಾವ್ ಬೋನ್ಸ್ಲೆ
ಅವರುಗಳು ಚಿತ್ರದಲ್ಲಿದ್ದಾರೆ







**If not delivered, please return to :**
THE EDITOR, **Karnataka Scout & Guide**
State Headquarters, Shanthi Gruha
#39, Palace Road, Bengaluru - 560 001
Ph.: 080-22260017 e-mail.: shq@scout.org.in
shanthigruha@scout.org.in / shq@bsgkarnataka.org

**Published by : The Bharat Scouts & Guides, Karnataka, State Headquarters**
**Shanthi Gruha,** #39, Palace Road, Bengaluru - 560 001. **Publisher & Editor : Siddaiah,** IAS (Retd.)
**Printed by : L. Lingappa, M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bengaluru-26